ಅಹಂ ಬ್ರಹ್ಮಾಸ್ಮಿ

॥ ಓಂ ತತ್ಸತ್ ॥



# ಉಪನಿಷತ್ಸಾರ ಸುಧಾಕರ

ಮತ್ತು

# ಮಹಾವಾಕ್ಯ ರತ್ನಾವಳಿ

ಬರೆದವರು ಮತ್ತು ಪ್ರಕಾಶಕರು :


ಶ್ರೀ ಆದಿದೇವಾನಂದಗಿರಿ ಸ್ವಾಮೀಜಿ

ವೇದಾಂತ ವಿದ್ವಾನ್ ವೇದವಿದ್ಯಾ ವಿಭೂಷಣ

ಕೈಲಾಸಾಶ್ರಮ

ಪೋ- S. S. ಪುರಮ್

ತುಮಕೂರು-572102


ಪ್ರಜ್ಞಾನಂ ಬ್ರಹ್ಮ

ತತ್ತ್ವಮಸಿ

ಅಯಮಾತ್ಮಾ ಬ್ರಹ್ಮ

ಪ್ರಕಾಶಕರು :
ಶ್ರೀ ಆದಿದೇವಾನಂದಸ್ವಾಮೀಜಿ
ಕೈಲಾಸಾಶ್ರಮ
ಪೋ. S. S. ಪುರಂ
ತುಮಕೂರು–೨

ಪ್ರಥಮ ಮುದ್ರಣ : ೪೦೦೦

ಬೆಲೆ : ೧೫—ರೂ.ಗಳು



ಮುದ್ರಕರು :
ಚಂದ್ರಶೇಖರ ಶಿ. ತಡಕೋಡ
ಶ್ರೀ ಶಾರದಾ ಪ್ರಿಂಟಿಂಗ್ ಪ್ರೆಸ್,
ತಡಕೋಡ ಗಲ್ಲಿ, ಧಾರವಾಡ.

|| ಓಂ ||

ತತ್ಸತ್ ಪರಬ್ರಹ್ಮಣೇ ನಮಃ

ಗ್ರಂಥಕರ್ತರ ಶ್ರೀಗುರುಗಳು



ಶ್ರೀ ಶ್ರೋ. ಬ್ರ. ಶಾಂತಾನಂದ ಮಹಾಸ್ವಾಮಿಗಳು.
ದಾವಣಗೇರಿಯ ಗುರುಶಾಂತಾಶ್ರಮ ಹಾಗೂ
ಋಜ್ಜದೋಣಿಯ ಶ್ರೀ ಶಂಕರಾಚಾರ್ಯ ಮಠಗಳ ಅಧ್ಯಕ್ಷರು.

## ಗ್ರಂಥಕರ್ತರು.



ಶ್ರೀ ಶ್ರೋ. ಬ್ರ. ಆದಿದೇವಾಸಂದ ಸ್ವಾಮೀಜಿ

ವೇದಾಂತ ವಿದ್ವಾನ್ ವೇದವಿದ್ಯಾ ವಿಭೂಷಣ ಶ್ರೀಕೈಲಾಸಾಶ್ರಮ

ಪೋ—S S ಪುರಂ ತುಮಕೂರು-೫೭೨೧೦೨

## ಮಂಗಲಾಚರಣೆ

ಓಂ ಶ್ರೀ ಸಂದ್ವಿಶ್ವಾಧಿಷ್ಠಾನಾಯ ಪರಮಹಂಸಾಯ ನಮಃ ।
ಯೋ ವಿಧ್ಯಾದಿ ವಿದೇಹಾಂತ ಮಹಾವಾಕ್ಯಾರ್ಥ ವಿಗ್ರಹಃ।
ರಾಮಚಂದ್ರಾಯ ತಸ್ಮೈ ಭೂತಾತ್ಮನೇ ನಮಃ

ಯಾವನು ವಿಧಿಯೇ ಮೊದಲ್ಗೊಂಡು ವಿದೇಹದವರೆಗಿರುವ ಮಹಾವಾಕ್ಯಗಳೇ ಶರೀರವಾಗಿರುವ ಸಂಪತ್ತಿನಿಂದ ಕೂಡಿ ಜಗತ್ತಿಗೆ ಅಧಿಷ್ಠಾನನಾದ ಸರ್ವ ಭೂತಗಳ ಆತ್ಮನಾಗಿದ್ದಾನೆಯೋ, ಆ ಶ್ರೀರಾಮಚಂದ್ರನಿಗೆ ನಾನು ನಮಸ್ಕರಿಸುತ್ತೇನೆ. ॥೧॥

ಯಃ ಪೂಜ್ಯೋ ಯತಿಭಿಃ ಸ್ವಧರ್ಮನಿರತೈರ್ಧ್ಯಾಯಂತಿ ಯಂ
ಯೋಗಿನೋ ಯೇನಾತ್ತಂ ನಿಗಮಾಂತವೇದ್ಯಮನಿಶಂ ಯಸ್ಮೈ
ಹವಿರ್ದೀಯತೇ ।।
ಯಸ್ಮಾತ್ಸ್ಥಾವರ ಜಂಗಮಂ ಸಮಭವದ್ಯಸ್ಯಾಂಶಮಾನೋಃ
ವರೋ
ಯಸ್ಮಿಂಲ್ಲೀನಮಿದಂ ಪ್ರಣೌಮಿ ಸತತಂ ತಂ ಶಾಂತಾನಂದ
ಸದ್ಗುರುಮ್ ॥

ಯಾವನು ತಮ್ಮ ಧರ್ಮಗಳಲ್ಲಿ ನಿರತರಾದ ಯತಿಗಳಿಂದ ಪೂಜಿಸಲು ಯೋಗ್ಯನಾಗಿರುವನೋ, ಯೋಗಿಗಳು ಯಾರನ್ನು ತಮ್ಮ ಮನದಲ್ಲಿ ಧ್ಯಾನ ಮಾಡುತ್ತಾರೆಯೋ, ಯಾರಿಂದ ಉಪನಿಷತ್ತುಗಳು

## ಮಂಗಲಾಚರಣೆ

ಓಂ ಶ್ರೀ ಸದ್ವಿಶ್ವಾಧಿಷ್ಠಾನಾಯ ಪರಮಹಂಸಾಯ ನಮಃ ।
ಯೋ ವಿಧ್ಯಾದಿ ವಿದೇಹಾಂತ ಮಹಾವಾಕ್ಯಾರ್ಥ ವಿಗ್ರಹಃ।
ಶ್ರೀ ರಾಮಚಂದ್ರಾಯ ತಸ್ಮೈ ಭೂತಾತ್ಮನೇ ನಮಃ

ಯಾವನು ವಿಧಿಯೇ ಮೊದಲ್ಗೊಂಡು ವಿದೇಹದವರೆಗಿರುವ ಮಹಾವಾಕ್ಯಗಳೇ ಶರೀರವಾಗಿರುವ ಸಂಪತ್ತಿನಿಂದ ಕೂಡಿ ಜಗತ್ತಿಗೆ ಅಧಿಷ್ಠಾನನಾದ ಸರ್ವ ಭೂತಗಳ ಆತ್ಮನಾಗಿದ್ದಾನೆಯೋ, ಆ ಶ್ರೀರಾಮ ಚಂದ್ರನಿಗೆ ನಾನು ನಮಸ್ಕರಿಸುತ್ತೇನೆ. ॥೧॥

ಯಃ ಪೂಜ್ಯೋ ಯತಿಭಿಃ ಸ್ವಧರ್ಮನಿರತೈರ್ಧ್ಯಾಯಂತಿ ಯಂ
ಯೋಗಿನೋ ಯೇನಾತ್ತಂ ನಿಗಮಾಂತವೇದ್ಯಮನಿಶಂ ಯಸ್ಮೈ
ಹವಿರ್ದೀಯತೇ ॥
ಯಸ್ಮಾತ್ಸ್ಥಾವರ ಜಂಗಮಂ ಸಮಭವದ್ಯಸ್ಯಾಂಶಮಾನೋಽ
ವರೋ
ಯಸ್ಮಿಂಲ್ಲೀನಮಿದಂ ಪ್ರಣೌಮಿ ಸತತಂ ತಂ ಶಾಂತಾನಂದ
ಸದ್ಗುರುಮ್ ॥

ಯಾವನು ತಮ್ಮ ಧರ್ಮಗಳಲ್ಲಿ ನಿರತರಾದ ಯತಿಗಳಿಂದ ಪೂಜಿಸಲು ಯೋಗ್ಯನಾಗಿರುವನೋ, ಯೋಗಿಗಳು ಯಾರನ್ನು ತಮ್ಮ ಮನದಲ್ಲಿ ಧ್ಯಾನ ಮಾಡುತ್ತಾರೆಯೋ, ಯಾರಿಂದ ಉಪನಿಷತ್ತುಗಳು

ಹೇಳುವ ಆತ್ಮನು ನಿರಂತರವಾಗಿ ಹೊಂದಲ್ಪಟ್ಟನೋ,ಯಾರಿಗೆ ಹವಿಸ್ಸು ಗಳು ಕೊಡಲ್ಪಡುತ್ತಿವೆಯೋ, ಯಾವನಿಂದ ಸ್ಥಾವರ ಜಂಗಮರೂಪ ಜಗತ್ತು ಹುಟ್ಟಿದೆಯೋ, ಹುಟ್ಟಿದ ಕಾರ್ಯವು ಯಾವನ ಅಂಶವಾಗಿ ದೆಯೋ, ಇವೆಲ್ಲವೂ ಯಾವನಲ್ಲಿ ಲೀನವಾಗುತ್ತದೆಯೋ ಆ ಬ್ರಹ್ಮ ರೂಪನಾದ ಶ್ರೀ ಶಾಂತಾನಂದ ಗುರುವನ್ನು ನಾನು ನಿರಂತರವಾಗಿ ನಮಸ್ಕರಿಸುತ್ತೇನೆ. ॥೨॥

ನತ್ವಾ ಶ್ರೀ ಶಾಂತಾನಂದೇದ್ರ ಪಾದಪಂಕೇರುಹದ್ವಯಮ್ ।
ಗ್ರಥ್ಯತೇ ವೈ ಮಹಾವಾಕ್ಯರತ್ನಾವಲಿರಿಯಂ ಮಯಾ ॥

ಯತಿಗಳಿಗೆ ಒಡೆಯರಾದ ಶ್ರೀ ಶಾಂತಾನಂದ ಮಹಾಸ್ವಾಮಿಗಳ ಎರಡೂ ಪಾದಕಮಲಗಳಿಗೆ ನಮಸ್ಕಾರ ಮಾಡಿ ನಾನು ಈ ಮಹಾ ವಾಕ್ಯ ರತ್ನಾವಲಿಯನ್ನು ಬರೆಯುತ್ತೇನೆ. ॥೩॥

ಯಸ್ಯ ಪಾದಾರವಿಂದಾನಾಂ ಸ್ಪರ್ಶನಮಾತ್ರೇಣ ಸಂಸಿದ್ಧಃ ।
ತೇನಾದಿದೇವಾನಂದೇನ ಕ್ರಿಯತೇ ವೈ ರತ್ನಾವಲಿಃ ॥

ಯಾರ ಪಾದಕಮಲಗಳ ಸ್ಪರ್ಶಮಾತ್ರದಿಂದ ಸಂಸಿದ್ಧನಾ ದನೋ, ಆ ಆದಿದೇವಾನಂದ ಸ್ವಾಮಿಯಿಂದ ಮಹಾವಾಕ್ಯ ರತ್ನಾ ವಲಿಯು ಬರೆಯಲ್ಪಟ್ಟಿದೆ.

# ಮುನ್ನುಡಿ

"ಅಸ್ಯ ಮಹತೋ ಭೂತಸ್ಯ ನಿಶ್ವಸಿತಮೇ ಋಗ್ವೇದ ಯಜುರ್ವೇದ ಸಾಮವೇದಃ" 'ಋಗ್ವೇದ' ಯಜುರ್ವೇದ ಸಾಮ ಮತ್ತು ಅಥರ್ವವೇದಗಳು ಈ ಸಗುಣ ಪರಮಾತ್ಮನ ನಿಸ್ವಾಸಗಳಾಗಿವೆ.' ಅಂದರೆ ಅಪೌರುಷೇಯಗಳಾಗಿವೆ. ಅವುಗಳ ಸಾರರೂಪವಾದ (ಶಿಖೆಗಳಾದ) ಮುಖ್ಯವಾದ ೧೦೮ ಉಪನಿಷತ್ತುಗಳಿವೆ. ಈಗಿನ ಕಾಲದಲ್ಲಿ ಅವೆಲ್ಲವುಗಳನ್ನು ಓದುವುದು ಎಲ್ಲರಿಗೂ ಸಾಧ್ಯವಿಲ್ಲ. ಆದರಲ್ಲಿಯೂ ಸಂಸ್ಕೃತ ಭಾಷಾಜ್ಞಾನವಿಲ್ಲದವರಿಗೆ ಅದು ಗಗನ ಕುಸುಮವಾಗಿದೆ. ಸಂಸ್ಕೃತ ಪಂಡಿತರು ಅವುಗಳನ್ನು ಓದಿದರೂ, ಅವುಗಳಲ್ಲಿರುವ ವಿಧ್ಯಾದಿ ವಾಕ್ಯಗಳನ್ನು ಒಂದೇ ಕಡೆ ಸಂಗ್ರಹಿಸುವುದು ಕಷ್ಟವಾಗುತ್ತದೆ. ಆದ್ದರಿಂದ ಉಪನ್ಯಾಸ ಮಾಡುವವರಿಗೆ ವಿಧಿವಾಕ್ಯಗಳು ಎಷ್ಟಿವೆ ಎಂಬುವನ್ನು ಅದರಂತೆ ಬಂಧಮೋಕ್ಷ ಮೊದಲಾದವುಗಳ ಸ್ವರೂಪವನ್ನು ಬೋಧಿಸುವ ವಾಕ್ಯಗಳು ಎಷ್ಟಿವೆ ಎಂಬುದನ್ನು ಈ ಗ್ರಂಥದಲ್ಲಿ ಸಂಗ್ರಹಿಸಲಾಗಿದೆ. ಮತ್ತು ಇವರಲ್ಲಿ ವಿಧಿ ಮೊದಲ್ಗೊಂಡು ವಿದೇಹ ಮುಕ್ತಿಯೇ ಕಡೆಯಾಗಿ ೨೦ ಭಾಗಗಳನ್ನು ಮಾಡಲಾಗಿದೆ. ಇದರಲ್ಲಿ ಮಹಾವಾಕ್ಯಗಳೆಂಬ ಅಮೂಲ್ಯ ರತ್ನಗಳಿರುವದರಿಂದ ಇದಕ್ಕೆ ಮಹಾವಾಕ್ಯರತ್ನಾವಳಿ ಎಂಬ ಹೆಸರನ್ನು ಇಟ್ಟಿದ್ದೇವೆ.

ನಾನು ೨, ೩ ಮಹಾವಾಕ್ಯಗಳನ್ನು ಕೂಡಿಸಿ ಒಂದೇ ವಾಕ್ಯ ಮಾಡಿ ಬರೆದಿದ್ದೇನೆ. ಅವುಗಳ ಮುಂದೆ ಒಂದೊಂದು ಗೆರೆಗಳನ್ನು

ಹಾಕಿದ್ದೇನೆ. ಅಲ್ಲಿಗೆ ಒಂದು ವಾಕ್ಯವೆಂದು ತಿಳಿಯಬೇಕು. ಈ ಮಹಾ ವಾಕ್ಯಗಳಿಗೆ ಸುಲಭವಾದ ಕನ್ನಡದಲ್ಲಿ ತಾತ್ಪರ್ಯವನ್ನು ಬರೆದಿದ್ದೇನೆ. ನನಗೆ ತಿಳಿಯದಿದ್ದನ್ನು ಧಾರವಾಡದ ದೊಡ್ಡ ಪಂಡಿತ ಪ್ರವರರಾದ ಬಾಲಚಂದ್ರ ಶಾಸ್ತ್ರಿಗಳಿಗೆ ಕೇಳಿ ತಿಳಿದುಕೊಂಡು ಬರೆದಿದ್ದೇನೆ. ಚಿಕ್ಕ ವಾಕ್ಯಗಳಿವೆ. ಅವುಗಳಿಗೆ ಚಿಕ್ಕದಾಗಿ ತಾತ್ಪರ್ಯವನ್ನು ಬರೆಯಲಾಗಿದೆ. ಇದು ಮುಮುಕ್ಷುಗಳಿಗೆ ನೆನಪಿನಲ್ಲಿಟ್ಟುಕೊಳ್ಳಲು ಬಹಳ ಅನುಕೂಲವಾಗಿದೆ. ಈ ಗ್ರಂಥವು ಚಿಕ್ಕದಾದರೂ ಅಣುಬಾಂಬಿನ ಹಾಗೆ ಇದನ್ನು ಓದಿದ ಕೇಳಿದವರ ಅಜ್ಞಾನ, ಕಾಮ, ಕರ್ಮ, ಮತ್ತು ಸಂಶಯಗಳನ್ನು, ನಾಶಮಾಡುತ್ತದೆ. ಮತ್ತು ಪರಮಾನಂದದಾಯಕವಾಗಿದೆ. ಇದು ಜೋಬಿನಲ್ಲಿ (ಕಿಸೆಯಲ್ಲಿ) ಇಟ್ಟುಕೊಂಡರೆ ಜೊತೆಯಲ್ಲಿದ್ದು ಮಿತ್ರನಂತೆ ಹಿತವನ್ನು ಬೋಧಿಸುತ್ತದೆ. ಕೆಲವರು ೧೦ ಉಪನಿಷತ್ತುಗಳನ್ನು ಓದಿರುತ್ತಾರೆ. ನೂರೆಂಟು ಉಪನಿಷತ್ತುಗಳನ್ನು ಓದಿರುವುದಿಲ್ಲ. ಇದು. ಅವರಿಗೂ ಕೂಡ ಬಹಳ ಉಪಯುಕ್ತವಾಗಿದೆ. ನಿಮ್ಮ ಉಪನ್ಯಾಸಕ್ಕೆ ಯಾವ ವಿಷಯ ಬೇಕೋ ಅದು ಈ ಗ್ರಂಥದಲ್ಲಿ ಪ್ರಮಾಣರೂಪದಿಂದ ದೊರೆಯುತ್ತದೆ. "ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ" "ಶ್ರುತಿ ವಿರಹಿತವಾದ ಮತವತಾನುಳಿವುದೇ ಚಂದ ಮಮ" 'ಆದ್ದರಿಂದ ನಿನಗೆ ಶಾಸ್ತ್ರವೇ ಪ್ರಮಾಣವು' 'ಶಾಸ್ತ್ರಪ್ರಮಾಣ ರಹಿತವಾದ ಅಭಿಪ್ರಾಯವನ್ನು ತ್ಯಾಗಮಾಡುವುದು ಚಂದವೆಂದು ಹೇಳಿದ್ದಾರೆ' ಮತ್ತು "ಶ್ರುತಿಯೇ

ಪ್ರಮಾಣವಖಿರರ್ಗೇ" 'ಎಲ್ಲರಿಗೂ ಶ್ರುತಿಯೇ ಪ್ರಮಾಣವಾಗಿದೆ. ಎಂದು ಶ್ರೀಮನ್ನಿಜಗುಣ ಶಿವಯೋಗಿಗಳೇ' ಅನೇಕ ಕಡೆ ಹೇಳಿದ್ದಾರೆ. ಎಲ್ಲಾ ಪ್ರಾಕೃತ ಭಾಷಾಗ್ರಂಥಗಳೂ ಕೂಡ ಶ್ರುತಿಪ್ರಮಾಣಗಳೇ ಆಧಾರವುಳ್ಳವುಗಳಾಗಿವೆ. ಅವುಗಳ ಯಥಾರ್ಥಜ್ಞಾನವಾಗ ಬೇಕಾದರೂ ಈ ಕಿರುಹೊತ್ತಿಗೆಯನ್ನು ನೀವು ಅವಶ್ಯವಾಗಿ ಓದಲೇ ಬೇಕು. ನೀವು ಹಣವನ್ನು ಕೊಟ್ಟರೆ ಗ್ರಂಥ ಕರ್ತನ ಶ್ರಮವು ಸಾರ್ಥಕವಾಗುವುದಿಲ್ಲ. ಇದನ್ನು ಓದಿ ತಿಳಿದು ಸಂತೋಷಪಟ್ಟರೆ ಆಗ ಸಾರ್ಥಕವಾಗುತ್ತದೆ. ಶಾಸ್ತ್ರ ಕೇಳುವವರಿಗೂ ಇದು ಗ್ರಾಹ್ಯ ವಾಗಿದೆ. ಹೇಳುವವರು ಯಾವ ಪ್ರಮಾಣವನ್ನು ಹೇಳಿದರೆಂಬು ದನ್ನು ನೋಡಬೇಕಾದರೆ ಇದು ಎಲ್ಲರ ಹತ್ತಿರ ಅವಶ್ಯವಾಗಿರಬೇಕು. ಮತ್ತು ಈ ಗ್ರಂಥದ ಕೈಬರಹವನ್ನು ಬರೆದ ಶಿವಶರಣೆ ಅಕ್ಕಮಹಾ ದೇವಿ 'ಸಾಹಿತ್ಯರತ್ನ' 'ಸಂಸ್ಕೃತ ಎಂ. ಎ.' ಇವರಿಗೂ ಹಾಗೂ ಪ್ರುಪ್ ತಿದ್ದಲು ನನ್ನೊಡನಿದ್ದು ಬಹಳ ಶ್ರಮಪಟ್ಟು ಸಹಕರಿಸಿದ ನನ್ನ ಆತ್ಮೀಯರಾದ ಸದ್ಗುರು ಐರಣಿ ಸ್ವಾಮಿಗಳ ಶಿಷ್ಯರಾದ ಶ್ರೀ ಶ್ರೋ. ಬ್ರ. ಸ್ವರೂಪಾನಂದ ಸ್ವಾಮಿಗಳಿಗೂ ಧನ್ಯವಾದಗಳು. ಮತ್ತು ಶಾರದಾ ಪ್ರಿಂಟಿಂಗ್ ಪ್ರೆಸ್ ಮಾಲಿಕರಾದ ಚಂದ್ರಶೇಖರಪ್ಪ ತಡಕೊಡ ಇವರು ಅಂದವಾಗಿ ಮುದ್ರಿಸಿದ್ದಾರೆ. ಅವರಿಗೆ ಕೃತಜ್ಞತೆಗಳು. ಶಾಂತಸಾಗರರಾದ ಕರುಣಾಮೂರ್ತಿಗಳಾದ ವೈರಾಗ್ಯ ನಿಧಿಗಳಾದ ನನ್ನ ಸದ್ಗುರುಗಳಾದ ಶ್ರೋ.ಬ್ರ. ಶ್ರೀ ಶಾಂತಾನಂದ ಮಹಾಸ್ವಾಮಿಗಳ

ಪಾದಾರವಿಂದಗಳಲ್ಲಿ ಈ ಮಹಾವಾಕ್ಯ ರತ್ನಾವಲಿಯನ್ನು ಸಮರ್ಪಿಸುತ್ತೇನೆ.

ಗುರುಭಕ್ತ
ಆದಿದೇವಾನಂದಸ್ವಾಮೀಜಿ
ವೇದಾಂತ ವಿದ್ವಾನ್
ವೇದವಿದ್ಯಾ ವಿಭೂಷಣ
ಕೈಲಾಸಾಶ್ರಮ.
ತುಮಕೂರು–೫೭೨೧೦೨

## ಮಹಾವಾಕ್ಯ ರತ್ನಾವಳಿಯಲ್ಲಿರುವ ವಿಷಯಮುಕ್ರ

## ಮೈತ್ರೇಯೋಪನಿಷತ್ತಿನ ದ್ವಿತೀಯ ಅಧ್ಯಾಯ

ಮಂತ್ರ : ದೇಹೋ ದೇವಾಲಯಃ ಪ್ರೋಕ್ತಃ ಸಜೀವಃ ಕೇವಲಃ ಶಿವಃ।
ತ್ಯಜೇದಜ್ಞಾನನಿರ್ಮಾಲ್ಯಂ ಸೋಽಹಂಭಾವೇನ
ಪೂಜಯೇತ್ ॥ ೧ ॥

ಟೀಕಾ : ಶರೀರವೇ ದೇವಸ್ಥಾನವೆಂದು ಹೇಳಲ್ಪಟ್ಟಿದೆ. ಅಲ್ಲಿರುವ ಜೀವನೇ ಕೇವಲ ಪರಶಿವನು. ಅಜ್ಞಾನವೆಂಬ ನಿರ್ಮಾಲ್ಯವವನ್ನು ತೆಗೆದು ಆ ದೇವನೇ ನಾನೆಂಬ ಭಾವದಿಂದ ಪೂಜಿಸಬೇಕು.

ಮಂತ್ರ : ಅಭೇದದರ್ಶನಂ ಜ್ಞಾನಂ ಧ್ಯಾನಂ ನಿರ್ವಿಷಯಂ ಮನಃ ।
ಸ್ನಾನಂ ಮನೋಮಲತ್ಯಾಗಃ
ಶೌಚಮಿಂದ್ರಿಯನಿಗ್ರಹಃ ॥ ೨ ॥

ಟೀಕಾ : ಜೀವೇಶ್ವರನನ್ನು ಅಭೇದವಾಗಿ ಕಾಣುವುದೇ ಜ್ಞಾನವು. ವಿಷಯಾಕಾರದ ವೃತ್ತಿಯು ಮನಸ್ಸಿನಲ್ಲಿ ಇಲ್ಲದಿರುವಿಕೆಯೇ ಧ್ಯಾನವು. ಮನಸ್ಸಿನ ಕಲ್ಮಷಗಳನ್ನು ಕಳೆದುಕೊಳ್ಳುವದೇ ಸ್ನಾನವು. ಇಂದ್ರಿಯ ಗಳನ್ನು ವಿಷಯಗಳಿಗೆರೆಗದಂತೆ ತಡೆಯುವುದೇ ಶೌಚವು.

ಮಂತ್ರ : ಅಹಂಕಾರಸುತಂ ವಿತ್ತಂ ಭ್ರಾತರಂ ಮೋಹಮಂದಿರಮ್ ।
ಆಶಾಪತ್ನೀಂ ತ್ಯಜೇತ್ ಯಾವತ್ತಾವನ್ಮುಕ್ತೋ
ನ ಸಂಶಯಃ ॥ ॥ ೩ ॥

ಟೀಕಾ: ಅಹಂಕಾರವೆಂಬ ಮಗನನ್ನು, ಧನವೆಂಬ ಸಹೋದರೆ ನನ್ನು, ಮೋಹವೆಂಬ ಮನೆಯನ್ನು, ಆಶೆಯೆಂಬ ಪತ್ನಿಯನ್ನು, ಯಾವಾಗ ಬೀಡುವನೋ ಆಗ ಮುಕ್ತನು. ಇವರಲ್ಲಿ ಸಂಶಯವಿಲ್ಲ.

**ಮಂತ್ರ** : ಮೃತಾ ಮೋಹಮಯೀ ಮಾತಾ ಜಾತೋ
ಬೋಧಮಯಃ ಸುತಃ ।
ಸೂತಕದ್ವಯ ಸಂಪ್ರಾಪ್ತೌ ಕಥಂ
ಸಂಧ್ಯಾಮುಪಾಸ್ಮಹೇ ॥ ೪ ॥

ಟೀಕಾ : ಮಾಯೆಯೆಂಬ ತಾಯಿಯು ಸತ್ತಿರುವಳು. ಜ್ಞಾನ ವೆಂಬ ಮಗನು ಹುಟ್ಟಿರುವನು. ಮರಣಸೂತಕ ಜನನಸೂತಕ ಇವೆರಡು ಸಂಭವಿಸಿರುವಲ್ಲಿ ಸಂಧ್ಯಾವಂದನೆಯನ್ನು ಹೇಗೆ ಮಾಡಬೇಕು?

**ಮಂತ್ರ** : ಹೃದಾಕಾಶೇ ಚಿದಾದಿತ್ಯಃ ಸದಾ ಭಾಸತೇ ಭಾಸತೇ ।
ನಾಸ್ತಮೇತಿ ನಚೋದೇತಿ ಕಥಂ
ಸಂಧ್ಯಾಮುಪಾಸ್ಮಹೇ ॥ ೫ ॥

ಟೀಕಾ : ಹೃದಯವೆಂಬ ಆಕಾಶದ ಮಧ್ಯದಲ್ಲಿ ಚಿತ್ತೆಂಬ ಸೂರ್ಯನು ನಿರಂತರವಾಗಿ ಅಂದರೆ, ಉದಯ ಅಸ್ತಮಾನಗಳಿಲ್ಲದೆ ಸದಾ ಪ್ರಕಾಶ ಮಾನವಾಗಿರುವಲ್ಲಿ ಸಂಧ್ಯಾವಂದನೆ ಮಾಡುವದು ಹೇಗೆ ತಾನೇ ಆದೀತು?

**ಮಂತ್ರ** : ಏಕಮೇವಾದ್ವಿತೀಯಂ ಯದ್ಗುರೋರ್ವಾಕ್ಯೇನ ನಿಶ್ಚಿತಮ್
ಏತದೇಕಾಂತಮಿತ್ಯುಕ್ತಂ ನ ಮಠೋ
ನ ವನಾಂತರಮ್ ॥ ೬ ॥

ಟೀಕಾ : ಗುರುವಾಕ್ಯದಿಂದ ಏಕಮೇವವೆಂಬುದಾಗಿಯೂ, ಅದ್ವಿತೀಯವೆಂಬುದಾಗಿಯೂ ಯಾವುದು ನಿಶ್ಚಯಿಸಲ್ಪಟ್ಟಿತೋ ಅದೇ ಏಕಾಂತವೆನಿಸುವುದು. ಮಠವು ವನವು ಏಕಾಂತವಲ್ಲ.

ಮಂತ್ರ: ಕರ್ಮತ್ಯಾಗಾತ್ ನ ಸಂನ್ಯಾಸಃ ನ ಪ್ರೇಷೋಚ್ಚಾರಣೇನ ತು।
ಸಂಧೌ ಜೀವಾತ್ಮನೋರೈಕ್ಯಂ ಸನ್ಯಾಸಃ
ಪರಿಕೀರ್ತಿತಃ ॥ ೭ ॥

ಟೀಕಾ : ಕರ್ಮತ್ಯಾಗದಿಂದಲೂ ಪುರಶ್ಚರಣೆ ಮಾಡುವುದರಿಂದಲೂ ಸಂನ್ಯಾಸವು ಸಿದ್ಧಿಸಲಾರದು. ಜೀವೇಶ್ವರರ ಸನ್ನಿಧಿಯಲ್ಲಿ ಐಕ್ಯಯಾವುದುಂಟೋ ಅದೇ ಸಂನ್ಯಾಸವೆನಿಸುವುದು.

ಮಂತ್ರ : ದ್ರವ್ಯಾರ್ಥಮನ್ನವಸ್ತ್ರಾರ್ಥಂ ಯಃ ಪ್ರತಿಷ್ಠಾರ್ಥಮೇವ ಚ।
ಸನ್ಯಸೇದುಭಯಭ್ರಷ್ಟಃ ಸಃಮುಕ್ತಿಂ ನಾಪ್ತುಮರ್ಹತಿ ॥ ೮ ॥

ಟೀಕಾ : ದ್ರವ್ಯಕ್ಕಾಗಿಯೂ, ಅನ್ನವಸ್ತ್ರಕ್ಕಾಗಿಯೂ, ಪ್ರತಿಷ್ಠೆಗಾಗಿಯೂ ಯಾವನು ಸಂನ್ಯಾಸವನ್ನು ಸ್ವೀಕರಿಸುವನೋ, ಇಹಲೋಕ ಪರಲೋಕಗಳಿಂದ ಭ್ರಷ್ಟನಾದ ಅವನು ಮುಕ್ತಿಯನ್ನು ಹೊಂದಲಾರನು. ॥ ೮ ॥

ಮಂತ್ರ : ಉತ್ತಮಾ ತತ್ತ್ವಚಿಂತೈವ ಮಧ್ಯಮಂ ಶಾಸ್ತ್ರಚಿಂತನಮ್ ।
ಅಧಮಾ ಮಂತ್ರಚಿಂತಾ ಚ
ತೀರ್ಥಭ್ರಾಂತ್ಯಧಮಾಧಮಾ ॥ ೯ ॥

ಟೀಕಾ ; ತತ್ತ್ವಚಿಂತನೆಯು ಉತ್ತಮವು. ಶಾಸ್ತ್ರಚಿಂತನೆಯು

ಮಧ್ಯಮವು. ಮಂತ್ರಜಪವು ಅಧಮವು. ತೀರ್ಥಯಾತ್ರಾ ಭ್ರಾಂತಿಯು
ಅಧಮಾಧಮವೆಂದು ತಿಳಿಯಬೇಕು. ॥ ೯ ॥

**ಮಂತ್ರ :** ಮನ್ಮಾಯಯಾ ಮೋಹಿತ ಚೇತಸೋ ಮಾಮಾತ್ಮಾನಮಾ-
ಪೂರ್ಣಮಲಬ್ಧವಂತಃ ।
ಪರಂ ವಿದಗ್ಧೋದರಪೂರಣಾಯ ಭ್ರಮಂತೀ ಕಾಕಾ
ಇವ ಸೂರಯೋಽಪಿ ॥

ಟೀಕಾ : ನನ್ನ ಮಾಯೆಯಿಂದ ಮೋಹಿತವಾದ ಮನಸ್ಸುಳ್ಳ
ನನ್ನನ್ನು ತಮ್ಮ ಪರಿಪೂರ್ಣಭಾವದಿಂದ ಹೊಂದಲಾರದೆ, ವಿದ್ವಾಂಸ
ರೆನಿಸಿದವರೂ ಕೂಡ ಹಾಳು ಹೊಟ್ಟೆಯ ಪೂರ್ತಿಗಾಗಿ ಕಾಗೆಗಳಂತೆ
ಭ್ರಮಿಸುತ್ತಿರುವರು.

**ಮಂತ್ರ :** ಪಾಷಾಣ ಲೋಹಮಣಿ ಮೃಣ್ಮಯ ವಿಗ್ರಹೇಷು
ಪೂಜಾ ಪುನರ್ಜನನ ಭೋಗಕರೀ ಮುಮುಕ್ಷೋಃ ।
ತಸ್ಮಾದ್ಯತಿಃ ಸ್ವಹೃದಯಾರ್ಚನಮೇವ ಕುರ್ಯಾತ್
ಬಾಹ್ಯಾರ್ಚನಂ ಪರಿಹರೇದಪುನರ್ಭವಾಯ ॥ ॥ ೧೧ ॥

ಟೀಕಾ : ಕಲ್ಲು, ಲೋಹ, ಮಣಿ, ಮಣ್ಣು ಇವುಗಳಿಂದ
ಮಾಡಲ್ಪಟ್ಟ ಮೂರ್ತಿಗಳನ್ನು ಪೂಜಿಸುವುದು. ಮುಮುಕ್ಷುಗಳಿಗೆ
ಪುನರ್ಜನ್ಮವನ್ನುಂಟುಮಾಡುತ್ತದೆ. ಆದ್ದರಿಂದ ಪ್ರಯತ್ನಶೀಲನಾದ
ಮುಮುಕ್ಷುವು ತನ್ನ ಹೃದಯಾರ್ಚನೆಯನ್ನೇ ಮಾಡಬೇಕು, ಜನ್ಮ
ಬರದಂತೆ ಮಾಡಿಕೊಳ್ಳುವುದಕ್ಕಾಗಿ ಬಾಹ್ಯಪೂಜೆಯನ್ನು ಬಿಡಬೇಕು.

ಮಂತ್ರ : ಅಂತಃಪೂರ್ಣೋ ಬಹಿಃಪೂರ್ಣೋ ಪೂರ್ಣಕುಂಭ
ಇವಾರ್ಣವೇ ।
ಅಂತಃಶೂನ್ಯೋ ಬಹಿಃಶೂನ್ಯಃ ಶೂನ್ಯಕುಂಭ
ಇವಾಂಬರೇ ॥ ೧೨ ॥

ಟೀಕಾ : ಆತ್ಮಜ್ಞಾನಿಗಳಿಗೆ ಪರಮಾತ್ಮನು ಸಮುದ್ರದಲ್ಲಿ ಮುಳು ಗಿರಿರುವ ಕೊಡದ ಒಳಗೂ ಹೊರಗೂ ಜಲ ಪರಿಪೂರ್ಣವಾಗಿರುವಂತೆ ಶರೀರದ ಒಳಗೂ ಹೊರಗೂ ತುಂಬಿರುತ್ತಾನೆ. ಸ್ವರೂಪಜ್ಞಾನ ವಿಲ್ಲದೇ ದೇವರನ್ನು ಹುಡುಕುವವರಿಗೆ ಬಯಲಿನಲ್ಲಿ ಇಟ್ಟಿರುವ ಘಟದ ಒಳಗೂ ಹೊರಗೂ ಹೇಗೆ ಶೂನ್ಯವೇ ಇರುವದೋ ಅದರಂತೆ ದೇಹದ ಒಳಗೂ ಹೊರಗೆ ಏನೂ ಕಾಣದೇ ಶೂನ್ಯವಾಗಿಯೇ ಇರುತ್ತಾರೆ.

## ಮೈತ್ರಿಕೋಪನಿಷತ್ತಿನ ಸಾರವು

ಮಂತ್ರ : ಬ್ರಹ್ಮಾದ್ಯಂ ಸ್ಥಾವರಾಂತಂ ಚ ಪಶ್ಯಂತಿ ಜ್ಞಾನಚಕ್ಷುಷಃ ।
ತಮೇಕಮೇವ ಪಶ್ಯಂತಿ ಪರಿಶುಭ್ರಂ
ವಿಭುಂ ದ್ವಿಜಾಃ ॥ ೧೩ ॥

ಟೀಕಾ : ಜ್ಞಾನನೇತ್ರವಿರುವ ಮಹಾಪುರುಷರು ಬ್ರಹ್ಮ ಮೊದಲುಗೊಂಡು ಸ್ಥಾವರವೇ ಕಡೆಯಾಗಿ ಉಳ್ಳ ಪ್ರಪಂಚವನ್ನು ಶುದ್ಧ ಪರಿಪೂರ್ಣ ಏಕಾಕಾರವಾಗಿಯೂ ಆ ಪರಮಾತ್ಮಸ್ವರೂಪವನ್ನಾಗಿಯೇ ತಿಳಿಯುವರು.

**ಮಂತ್ರ :** ಯಸ್ಮಿನ್ ಸರ್ವಮಿದಂ ಪ್ರೋತಂ ಬ್ರಹ್ಮಸ್ಥಾವರ
ಜಂಗಮಮ್ ॥
ತಸ್ಮಿನ್ನೇವ ಲಯಂ ಯಾತಿ ಸ್ರವಂತ್ಯಃ
ಸಾಗರೇ ಯಥಾ ॥ ೧೪ ॥

ಟೀಕಾ : ಚತುರ್ಮುಖ ಬ್ರಹ್ಮನೇ ಮೊದಲುಗೊಂಡು ಸ್ಥಾವರ ಜಂಗಮವೆನಿಸುವ ಸರ್ವ ಪ್ರಪಂಚವು ಸೂತ್ರದಲ್ಲಿ ಮಣಿಗಳಿರುವಂತೆ ಯಾವನಲ್ಲಿ ಸೇರಿಕೊಂಡಿವೆಯೋ, ಸಮುದ್ರದಲ್ಲಿ ನದಿಗಳು ಲಯವಾಗುವಂತೆ ಅವು ಆ ಪರಮಾತ್ಮನಲ್ಲಿ ಲಯವಾಗುತ್ತವೆ.

## ತೇಜೋ ಬಿಂದೋಪನಿಷತ್ತಿನ ಸಾರವು

**ಮಂತ್ರ :** ಯಮೋ ಹಿ ನಿಯಮಸ್ತ್ಯಾಗೋ ಮೌನಂ
ದೇಶಶ್ಚ ಕಾಲತಃ ॥
ಆಸನಂ ಮೂಲಬಂಧಶ್ಚ ದೇಹಸಾಮ್ಯಂ
ಚ ದೃಕ್‌ಸ್ಥಿತಿಃ ॥ ॥ ೧೫ ॥

ಟೀಕಾ : ಯಮ, ನಿಯಮ, ತ್ಯಾಗ, ಮೌನ, ಆಸನ, ಮೂಲಬಂಧನ, ದೇಹಸಾಮ್ಯ ಮತ್ತು. ದೃಷ್ಟಿಯ ಏಕಾಗ್ರತೆಯು.

**ಮಂತ್ರ :** ಪ್ರಾಣಸಂಯಮನಂ ಚೈವ ಪ್ರತ್ಯಾಹಾರಶ್ಚ ಧಾರಣಾ ॥
ಆತ್ಮಧ್ಯಾನಂ ಸಮಾಧಿಶ್ಚ ಪ್ರೋಕ್ತಾನ್ಯಂಗಾನಿ
ವೈ ಕ್ರಮಾತ್ ॥ ೧೬ ॥

ಟೀಕಾ : ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ ಎಂಬ ಈ ಅಂಗಗಳನ್ನು ಮುಮುಕ್ಷುಗಳು ಮೋಕ್ಷಕ್ಕಾಗಿ ಅಭ್ಯಾಸ ಮಾಡಬೇಕು. ॥ ೧೬ ॥

**ಮಂತ್ರ** : ಸರ್ವಂ ಬ್ರಹ್ಮೇತಿ ವೈ ಜ್ಞಾನಾತ್ ಇಂದ್ರಿಯಗ್ರಾಮ
ಸಂಯಮಃ ।
ಯಮೋಽಯಮಿತಿ ಸಂಪ್ರೋಕ್ತೋಽಭ್ಯಸ
ನೀಯೋಮುರ್ಹುಮುರ್ಹುಃ ॥ ೧೭ ॥

ಟೀಕಾ : ಸರ್ವವೂ ಬ್ರಹ್ಮಮಯವೆಂಬ ಜ್ಞಾನದಿಂದ (ಭಾವನೆಯಿಂದ) ಇಂದ್ರಿಯಗಳನ್ನು ನಿಲ್ಲಿಸುವುದೇ ಯಮವೆನಿಸುವುದು. ಇದನ್ನು ಬಿಡದೇ ಪುನಃ ಪುನಃ ಅಭ್ಯಾಸ ಮಾಡಬೇಕು. ॥ ೧೭ ॥

**ಮಂತ್ರ** : ಸಜಾತೀಯ ಪ್ರವಾಹಶ್ಚ ವಿಜಾತೀಯ ತಿರಸ್ಕೃತಿಃ ।
ನಿಯಮೋ ಹಿ ಪರಾನಂದೋ
ನಿಯಮಾತ್ಕ್ರಿಯತೇ ಬುಧೈಃ ॥ ೧೮ ॥

ಟೀಕಾ : ಕಾಣುವ ಪದಾರ್ಥಗಳಲ್ಲಿ ಸಜಾತೀಯವಾದ ಆತ್ಮಸತ್ತಾವ್ಯಾಪ್ತಿ ಧಾರಢ್ಯದಿಂದ ವಿಜಾತೀಯವಾದ ನಾಮರೂಪುಗಳ ತಿರಸ್ಕಾರವೇ ಆನಂದಜನಕವಾದ ನಿಯಮವೆನಿಸುವುದು. ಈ ನಿಯಮವು ಜ್ಞಾನಿಗಳಿಂದ ನಿಯತವಾಗಿ ಅಭ್ಯಾಸಮಾಡಲ್ಪಡುತ್ತದೆ. ॥೧೮॥

ಮಂತ್ರ : ತ್ಯಾಗಃ ಪ್ರಪಂಚರೂಪಸ್ಯ ಸಚ್ಚಿದಾತ್ಮಾವಲೋಕನಾತ್ ।
ತ್ಯಾಗೋ ಹಿ ಮಹತಾಂ ಪೂಜ್ಯಃ ಸದ್ಯೋ
ಮೋಕ್ಷಪ್ರದಾಯಕಃ ॥ ೧೯ ॥

ಟೀಕಾ : ಪಂಚಭೂತಾತ್ಮಕವಾದ ಪ್ರಪಂಚವನ್ನು ಸಚ್ಚಿದಾನಂದ ಸ್ವರೂಪನಾದ ಪರಮಾತ್ಮಸ್ವರೂಪವನ್ನಾಗಿ ತಿಳಿಯುವುದೇ ತ್ಯಾಗವು. ಈ ತ್ಯಾಗವು ಲೋಕಪೂಜ್ಯವಾದದ್ದು ಮತ್ತು ಮೋಕ್ಷಪ್ರದಾಯಕ ವಾದದ್ದು ಎಂಬ ಭಾವ. ॥ ೧೯ ॥

ಮಂತ್ರ : ಯಸ್ಮಾದ್ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ
ಯನ್ಮೌನಂ ಯೋಗಿಭಿರ್ಗಮ್ಯಂ ಯತ್ತದ್ಭವೇತ್
ಸರ್ವದಾ ಬುಧಃ ।
ವಾಚೋ ಯಸ್ಮಾನ್ನಿವರ್ತಂತೇ ತದ್ವಕ್ತುಂ ಕೇನ ಶಕ್ಯತೇ
ಪ್ರಪಂಚೋ ಯದಿ ವಕ್ತವ್ಯಃ ಸೋಽಪಿ
ಶಬ್ದ ವಿವರ್ಜಿತಃ ॥ ೨೦ ॥

ಟೀಕಾ : ಯಾವ ವಸ್ತುವನ್ನು ಮನಸ್ಸಿನಿಂದಲೂ ಹೊಂದುವು ದಕ್ಕಾಗದೇ ಶ್ರುತಿವಾಕ್ಯಗಳು ಹಿಂದಿರುಗುವವೋ, ಯಾವುದು ಯೋಗಿ ಗಳಿಂದಲೇ ಹೊಂದತಕ್ಕದ್ದಾಗಿದೆಯೋ, ಅದು ಮೌನವೆನಿಸುವುದು. ಈ ಮೌನವನ್ನು ಜ್ಞಾನಿಗಳು ಧರಿಸುತ್ತಾರೆ. ಆದರೆ ತತ್ತ್ವಜ್ಞರೇ ಮೌನ ವನ್ನು ಬಲ್ಲವರು ಎಂಬ ಭಾವವು. ಬಾಯಿಯಿಂದ ಮಾತಾಡದೇ ಇರುವ

ಮೌನವು ಬಾಲಕರಂತಿರುವ ಅಜ್ಞಾನಿಗಳಿಗೆ ಹೊರತು ಅದು ಬ್ರಹ್ಮ
ವಾದಿಗಳಿಗೆ ಯೋಗ್ಯವಾದದ್ದಲ್ಲವು ॥ ೨೦ ॥

ಮಂತ್ರ : ಆದಾವಂತ್ಯೇ ಚ ಮಧ್ಯೇ ಚ ಜನೋ ಯಸ್ಮಿನ್ನವಿದ್ಯತೇ ।
ಯೇನೇದಂ ಸತತಂ ವ್ಯಾಪ್ತಂ ಸಃ
ದೇಶೋ ವಿಜನಃ ಸ್ಮೃತಃ ॥ ೨೧ ॥

ಟೀಕಾ : ಆದಿ, ಅಂತ್ಯ, ಮಧ್ಯ ಇವುಗಳಲ್ಲಿ ಹುಡಕಿದರೆ ಯಾವ ವಸ್ತುವಿನಲ್ಲಿ ಜಗತ್ತು ಕಾಣುವುದಿಲ್ಲವೋ, ಮತ್ತು ಯಾವುದರ ಸತ್ತೆಯು ಸರ್ವಕ್ಕೂ ಆಧಾರವಾಗಿ ನಾಮರೂಪಗಳಲ್ಲಿ ವ್ಯಾಪಿಸಿಕೊಂಡಿರುವುದೋ, ಆ ಪ್ರದೇಶವೇ ಏಕಾಂತವೆನಿಸುವುದು.

ಮಂತ್ರ : ಸುಖೇನೈವ ಭವೇದ್ಯಸ್ಮಿನ್ನಜಸ್ರಂ ಬ್ರಹ್ಮಚಿಂತನಮ್ ।
ಆಸನಂ ತದ್ವಿಜಾನೀಯಾದನ್ಯತ್ ಸುಖವಿನಾಶನಮ್ ॥ ೨೨ ॥

ಟೀಕಾ : ಯಾವ ರೀತಿ ಕುಳಿತುಕೊಳ್ಳುವದರಿಂದ ಅನಾಯಾಸವಾಗಿ ನಿರಂತರದಲ್ಲಿಯೂ ಬ್ರಹ್ಮಚಿಂತನೆಯಲ್ಲಿ ಬುದ್ಧಿ ನಿಲ್ಲುವುದೋ ಅದೇ ಪರಮಾಸನವೆನಿಸುವುದು. ಕೈಕಾಲುಗಳನ್ನು ಸೆಳೆದುಕೊಳ್ಳುವ ಇತರ ಆಸನಗಳು ಸುಖವಿನಾಶಕಾರಿಗಳು.

ಬಳಿಕ ದೇಹಸಾಮ್ಯಕ್ರಮವು ಹೇಳಲ್ಪಡುತ್ತದೆ

ಮಂತ್ರ : ಅಂಗಾನಾಂ ಸಮತಾಂ ವಿದ್ಯಾತ್ಸಮೇ ಬ್ರಹ್ಮಣಿ ಲೀಯತೇ ।
ನೋ-ಚೇನ್ನೈವ ಸಮಾನತ್ವಂ ಋಜುತ್ವಂ
ಶುಷ್ಕವೃಕ್ಷವತ್ ॥ ೨೩ ॥

ಟೀಕಾ : ಅವಯವಗಳೆಂಬ ಕಲ್ಪಿತ ನಾಮರೂಪಗಳನ್ನು ತ್ಯಜಿಸಿ ಸತ್ತಾಭಿನ್ನಭಾವದಿಂದ ಸ್ಥೂಲ, ಸೂಕ್ಷ್ಮ, ಕಾರಣಾತ್ಮಕ ಶರೀರತ್ರಯವನ್ನು ಸದ್ರೂಪ ವಸ್ತುವಿನಲ್ಲಿ ಲಯಪಡಿಸುವುದೇ ದೇಹ ಸಾಮ್ಯವೆನಿಸುವುದು. ಸಾಮ್ಯವೆಂದರೆ ಶರೀರವನ್ನು ಸಮವಾಗಿ ನಿಲ್ಲಿಸುವುದೆಂದರ್ಥ. ಇದನ್ನು ಬಿಟ್ಟು ಎದೆಯನ್ನು ಮುಂದಕ್ಕೆ ಚಾಚಿ ಪದ್ಮಾಸನವನ್ನು ಹಾಕಿಕೊಂಡು ಶರೀರವನ್ನು ನೇರವಾಗಿರಿಸುವುದು ದೇಹಸಾಮ್ಯವಲ್ಲ. ಅದು ಒಣಗಿದ ಮರದಂತೆ ವ್ಯರ್ಥವೆನಿಸುವುದು.

**ಮಂತ್ರ :** ದೃಷ್ಟಿಂ ಜ್ಞಾನಮಯೀಂ ಕೃತ್ವಾ ಪಶ್ಯೇದ್ಬ್ರಹ್ಮಮಯಂ ಜಗತ್ ।
ಸಾ ದೃಷ್ಟಿಃ ಪರಮೋದಾರಾ ನ
ನಾಸಾಗ್ರಾವಲೋಕಿನೀ ॥ ೨೪ ॥

ಟೀಕಾ : ದೃಷ್ಟಿಯನ್ನು ಜ್ಞಾನಮಯವನ್ನಾಗಿ ಮಾಡಿಕೊಂಡು ಜಗತ್ತನ್ನು ಬ್ರಹ್ಮಮಯವನ್ನಾಗಿ ನೋಡಬೇಕು. ಆ ದೃಷ್ಟಿಯೇ ಸರ್ವೋತ್ಕೃಷ್ಟವಾದದ್ದು. ಮೂಗಿನ ಕೊನೆಯನ್ನು ನೋಡುವುದು ದೃಷ್ಟಿಯಲ್ಲ. ಇದನ್ನು ಲಕ್ಷಾನುಸಂಧಾನವೆನ್ನುತ್ತಾರೆ.

**ಬಳಿಕ ಪ್ರಾಣಾಯಾಮದ ಸ್ವರೂಪವು ಹೇಳಲ್ಪಡುತ್ತದೆ:**

**ಮಂತ್ರ : ಚಿತ್ತಾದಿ ಸಮಭಾವೇಷು ಬ್ರಹ್ಮತ್ವೇನೈವ ಭಾವನಾತ್ ।**
**ನಿರೋಧಃ ಸರ್ವವೃತ್ತೀನಾಂ ಪ್ರಾಣಾಯಾಮಃ**
**ಸ ಉಚ್ಯತೇ ॥ ॥ ೨೫ ॥**

ಟೀಕಾ ; ನಾಮರೂಪಾಕಾರವೃತ್ತಿಯನ್ನು ನಿರೋಧಿಸಿ ಚಿತ್ತಾದಿ ಸಕಲ ಭಾವಗಳನ್ನು ಬ್ರಹ್ಮಭಾವನೆಯಲ್ಲಿ ನೆಲೆಗೊಂಬುವುದೇ ಪ್ರಾಣಾಯಾಮವು.

ಮಂತ್ರ : ನಿಷೇಧನಂ ಪ್ರಪಂಚಸ್ಯ ರೇಚಕಾಖ್ಯಃ ಸಮೀರಿತಃ ।
ಬ್ರಹ್ಮೈವಾಸ್ಮೀತಿ ಯಾ ವೃತ್ತಿಃ ಪೂರಕೋ ವಾಯುರುಚ್ಯತೇ ॥
ತತಸ್ತದ್ವೃತ್ತಿನೈಶ್ಚಲ್ಯಂ ಕುಂಭಕಃ ಪ್ರಾಣಸಂಯಮಃ ।
ಅಯಂ ಚಾಪಿ ಪ್ರಬುದ್ಧಾನಾಂ ಅಜ್ಞಾನಾಂ ಘ್ರಾಣಪೀಡನಮ್ ॥ ೨೬ ॥

ಟೀಕಾ : ಪ್ರಾಣಾಯಾಮಕ್ಕೆ ಸೇರಿದ ರೇಚಕ, ಪೂರಕ, ಕುಂಭಕಗಳ ನಿರ್ಣಯವನ್ನು ಪ್ರಪಂಚದಲ್ಲಿ ಉತ್ಪತ್ತಿನಾಶಗಳಿಂದ ಕೂಡಿರುವ ನಾಮರೂಪಗಳನ್ನು ನಿಷೇಧಿಸುವುದೇ ರೇಚಕವು. ಆ ನಾಮರೂಪಗಳಿಗೆ ಅಧಿಷ್ಠಾನವಾದ ಸಚ್ಚಿದಾನಂದ ಬ್ರಹ್ಮವೇ ನಾನಾಗಿರುವೆನೆಂಬ ವೃತ್ತಿಯೇ ಪೂರಕವು ಈ ಪೂರಕವೃತ್ತಿಯು ಚಲಿಸದೇ ದೃಢವಾಗಿ ನಿಲ್ಲುವುದೇ ಕುಂಭಕವೆನಿಸುವುದು. ಈ ಪ್ರಾಣಾಯಾಮವು ಆತ್ಮತತ್ತ್ವವನ್ನು ಬಲ್ಲ ಮಹಾತ್ಮರು ಹೇಳಲ್ಪಟ್ಟ ಪ್ರಾಣಾಯಾಮವು. ಅಜ್ಞಾನಿಗಳಿಗಾದರೂ ಮೂಗನ್ನು ಪೀಡಿಸುವ ಪ್ರಾಣಾಯಾಮವು ಹೇಳಲ್ಪಡುತ್ತದೆ. ॥ ೨೬ ॥

ಮಂತ್ರ : ವಿಷಯೇಷ್ವಾತ್ಮತಾಂ ದೃಷ್ಟ್ವಾ ಮನಸಶ್ಚಿತ್ತರಂಜಕಮ್ ।
ಪ್ರತ್ಯಾಹಾರಃ ಸಃ ವಿಜ್ಞೇಯೋಽಭ್ಯಸನೀಯೋ
ಮುಹುರ್ಮುಹುಃ ॥ ೨೭ ॥

ಟೀಕಾ : ಮನಸ್ಸಿಗೆ ಸಂಬಂಧವಾದ ಶಬ್ದ, ಸ್ಪರ್ಶ, ರೂಪ,ರಸ, ಗಂಧಗಳಲ್ಲಿ ಸ್ವಸತ್ತಾವ್ಯಾಪ್ತಿಯಿಂದ ಆತ್ಮಭಾವದಂತೆ ನೋಡಿ ಮನಸ್ಸಿಗೆ ರಂಜನೆಯನ್ನುಂಟುಮಾಡುವುದೇ ಪ್ರತ್ಯಾಹಾರವು. ಇದನ್ನು ನಿರಂತರವೂ ಅಭ್ಯಾಸ ಮಾಡತಕ್ಕದ್ದು. ॥ ೨೭ ॥

ಬಳಿಕ ಧಾರಣಾಕ್ರಮವನ್ನು ಹೇಳುತ್ತಾರೆ

ಮಂತ್ರ : ಯತ್ರ ಯತ್ರ ಮನೋ ಯಾತಿ ಬ್ರಹ್ಮಣಸ್ತತ್ರ ದರ್ಶನಾತ್।
ಮನಸಾ ಧಾರಣಂ ಚೈವ ಧಾರಣಾ ಸಾ
ಪರಾ ಮತಾ ॥ ೨೮ ॥

ಟೀಕಾ : ಪ್ರತ್ಯಾಹಾರದಿಂದ ಆತ್ಮಾಕಾರ ವೃತ್ತಿಯು ಯಾವಾಗಲೂ ಬೆಳಗುತ್ತಿರು ಎಲ್ಲೆಲ್ಲಿ ಮನಸ್ಸು ನಿಲ್ಲುವುವೋ ಅಲ್ಲೆಲ್ಲಾ ಆತ್ಮಸ್ವರೂಪವೇ ಬೆಳಗುವುದರಿಂದ ಈ ವೃತ್ತಿಯು ಮನದಲ್ಲಿ ದೃಢವಾಗಿ ನಿಲ್ಲುವುದೇ ಧಾರಣವೆನಿಸುವುದು. ಈ ಧಾರಣೆಯು ಅತ್ಯುತ್ತಮವಾದದ್ದು. ॥ ೨೮ ॥

### ಬಳಿಕ ಧ್ಯಾನದ ಲಕ್ಷಣವು ಹೇಳಲ್ಪಡುತ್ತದೆ

ಮಂತ್ರ : ಬ್ರಹ್ಮೈವಾಸ್ಮೀತಿ ಸದ್ವೃತ್ತ್ಯಾ ನಿರಾಲಂಬತಯಾ ಸ್ಥಿತಿಃ ।
ಧ್ಯಾನಶಬ್ದೇನ ವಿಖ್ಯಾತಃ ಪರಮಾನಂದದಾಯಕಃ ॥ ೨೯ ॥

ಟೀಕಾ : ಸಚ್ಚಿದಾನಂದವೆಂಬ ಸದ್ವೃತ್ತಿಯಿಂದ ಉಂಟಾಗುವ ನಿರಾಲಂಬ ಸ್ಥಿತಿಯು ಧ್ಯಾನಶಬ್ದದಿಂದ ಕರೆಯಿಸಿಕೊಳ್ಳುತ್ತದೆ. ಇದು ಪರಮಾನಂದಪ್ರದವು.

### ಇನ್ನು ಸಮಾಧಿಯ ಲಕ್ಷಣವು ಹೇಳಲ್ಪಡುತ್ತದೆ

ಮಂತ್ರ : ನಿರ್ವಿಕಾರತಯಾ ವೃತ್ತ್ಯಾ ಬ್ರಹ್ಮಾಕಾರತಯಾ ಪುನಃ ।
ವೃತ್ತಿವಿಸ್ಮರಣಂ ಸಮ್ಯಕ್ ಸಮಾಧಿರಭಿಧೀಯತೇ ॥ ೩೦ ॥

ಟೀಕಾ : ನಾಮ, ರೂಪ ವಿಕಾರವಿಲ್ಲದ ವೃತ್ತಿಯಿಂದ ಬ್ರಹ್ಮಾಕಾರವೃತ್ತಿಯು ಸ್ಥಿರಪಟ್ಟು ನಾನು ಬ್ರಹ್ಮವೆಂಬ ಸಾತ್ತ್ವಿಕ ಅಹಂಕಾರವು ಲಯವಾಗಿ ಉಳಿಯುವ ಸ್ವರೂಪಾನಂದಾವಿರ್ಭಾವವೇ ಸಮಾಧಿಯೆನಿಸುವುದು.

ಮಂತ್ರ : ಇಮಂ ಚಾಕೃತ್ರಿಮಾನಂದಂ ತಾವತ್ಸಾಧು ಸಮಭ್ಯಸೇತ್ ।
ಕುಶಲಾ ಬ್ರಹ್ಮವಾರ್ತಾಯಾಂ ವೃತ್ತಿಹೀನಾಃ ಸುರಾಗಿಣಃ ।
ತೇಽಪ್ಯಜ್ಞಾನತಯಾ ನೂನಂ
ಪುನರಾಯಾಂತಿ ಯಾಂತಿ ಚ ॥ ೩೧ ॥

ಟೀಕಾ : ಈ ಸಮಾಧಿಯು ಕೃತ್ರಿಮವಲ್ಲದ ಆನಂದವನ್ನುಂಟು

ಮಾಡುತ್ತದೆ. ಇದನ್ನು ಚೆನ್ನಾಗಿ ಸಾಧನೆಗಳಿಂದ ಅಭ್ಯಾಸ ಮಾಡ ಬೇಕು. ಕಾಮ ಕ್ರೋಧಗಳಿಂದ ಕೂಡಿದ ಬುದ್ಧಿಯಲ್ಲಿ ಬ್ರಹ್ಮಾಕಾರ ವೃತ್ತಿಯು ಸ್ಥಿರಪಡದೆ ಬ್ರಹ್ಮವಾರ್ತೆಯಲ್ಲಿ ಕುಶಲರಾದ ಬ್ರಹ್ಮಾದಿ ಗಳು ಜನನ ಮರಣವನ್ನು ಹೊಂದುವರು.

**ಮಂತ್ರ** : ಅಹಂ ಬ್ರಹ್ಮಾಸ್ಮಿ ಮಂತ್ರೋಽಯಂ ದೃಶ್ಯಪಾಪಂ
ವಿನಾಶಯೇತ್ ।

ಅಹಂ ಬ್ರಹ್ಮಾಸ್ಮಿ ಮಂತ್ರೋಽಯಂ ಜ್ಞಾನಾನಂದ
ಪ್ರಮುಚ್ಯತೇ ॥ ೩೨ ॥

ಟೀಕಾ : ಅಹಂ ಬ್ರಹ್ಮಾಸ್ಮಿ ಮಂತ್ರವು ದೃಶ್ಯಪಾಪವನ್ನು ನಾಶ ಪಡಿಸುವುದು. ಅಹಂ ಬ್ರಹ್ಮಾಸ್ಮಿ ಮಂತ್ರವು ಜ್ಞಾನಾನಂದವನ್ನು ಉಂಟುಮಾಡುತ್ತದೆ.

**ಮಂತ್ರ** : ಸರ್ವಮಂತ್ರಾನ್ ಸಮುತ್ಸೃಜ್ಯ ಯೋ ತನ್ಮಂತ್ರಂ
ಸದಾಭ್ಯಸೇತ್ ।

ಸದ್ಯೋಮೋಕ್ಷಮವಾಪ್ನೋತಿ ನಾಸ್ತಿ
ಸಂದೇಹಮಣ್ವಪಿ ॥ ೩೩ ॥

ಟೀಕಾ ; ಜನ್ಮಪರಂಪರೆಗಳನ್ನುಂಟುಮಾಡುವ ಸಕಲ ಮಂತ್ರ ಗಳನ್ನೂ ತ್ಯಜಿಸಿ ಅಹಂ ಬ್ರಹ್ಮಾಸ್ಮಿ ಎಂಬ ಮಂತ್ರವನ್ನು ಯಾವಾಗಲೂ ಅಭ್ಯಾಸ ಮಾಡುತ್ತಿರಬೇಕು. ಈ ಮಂತ್ರದ ಮಹಿಮೆಯನ್ನು ಬಲ್ಲ ಮಹಾತ್ಮನು ಈ ಜನ್ಮದಲ್ಲಿಯೇ ಮುಕ್ತನಾಗುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ. ॥ ೩೩ ॥

## ತೇಜೋಬಿಂದೋಪನಿಷತ್ತಿನ ಐದನೆಯ ಅಧ್ಯಾಯ

**ಮಂತ್ರ** : ಚಿತ್ತಾಭಾವಾಚ್ಚಿಂತನೀಯಂ ದೇಹಾಭಾವಾಜ್ಜರಾ ನ ಚ ।
ಪಾದಾಭಾವಾದ್ಗತಿರ್ನಾಸ್ತಿ ಹಸ್ತಾಭಾವಾತ್ಕ್ರಿಯಾ ನ ಚ ॥ ೩೪ ॥

ಟೀಕಾ : ಚಿತ್ತವಿಲ್ಲದ್ದರಿಂದ ಚಿಂತನೀಯವಾದ ವಸ್ತುವಿಲ್ಲ, ದೇಹವಿಲ್ಲದ್ದರಿಂದ ಮುಪ್ಪಿಲ್ಲ. ಕಾಲುಗಳಿಲ್ಲದ್ದರಿಂದ ಚಲನವಿಲ್ಲ. ಕೈಗಳಿಲ್ಲದ್ದರಿಂದ ಕ್ರಿಯೆಗಳಿಲ್ಲ.

**ಮಂತ್ರ** : ಮೃತ್ಯುರ್ನಾಸ್ತಿ ಜನಾಭಾವವದ್ಬುದ್ಧ್ಯಭಾವಾತ್ಸುಖಾದಿಕಮ್ ।
ಧರ್ಮೋ ನಾಸ್ತಿ ಶುಚಿರ್ನಾಸ್ತಿ ಸತ್ಯಂ ನಾಸ್ತಿ ಭಯಂ ನ ಚ ॥ ೩೫ ॥

ಟೀಕಾ : ಹುಟ್ಟಿಲ್ಲದ್ದರಿಂದ ಸಾವು ಇಲ್ಲ. ಬುದ್ಧಿ ಇಲ್ಲದ್ದರಿಂದ ಅದರ ಸಂಬಂಧವಾದ ಸುಖದುಃಖಗಳೂ ಇಲ್ಲ. ಧರ್ಮವಿಲ್ಲದ್ದರಿಂದ ಶುಚಿತ್ವವಿಲ್ಲ ತನ್ನ ಬಿಟ್ಟು ಬೇರೆ ಸತ್ಯವಿಲ್ಲದ್ದರಿಂದ ಭಯವೂ ಇಲ್ಲ.

**ಮಂತ್ರ** : ಏಕಾಭಾವೇ ದ್ವಿತೀಯಂ ನ ।
ನ ದ್ವಿತೀಯೇ ನ ಚೈಕತಾ ॥ ೩೬ ॥

ಟೀಕಾ : ಒಂದಿಲ್ಲದ್ದರಿಂದ ಎರಡೆಂಬುದಿಲ್ಲ. ಇದರಂತೆ ಎರಡಿಲ್ಲದಿದ್ದರೆ ಒಂದೂ ಇಲ್ಲ.

**ಮಂತ್ರ** : ಶುಭಂ ಯದ್ಯಶುಭಂ ವಿದ್ಧಿ ಹ್ಯಶುಭಾಚ್ಛುಭಮಿಷ್ಯತೇ ।
ಬಂಧತ್ವಮಸ್ತಿ ಚೇನ್ಮೋಕ್ಷೋ ಬಂಧಾಭಾವೇ ನ ಮೋಕ್ಷತಾ ॥ ೩೭ ॥

ಟೀಕಾ : ಶುಭವಿದ್ದಲ್ಲಿ ಅಶುಭ ಉಂಟಾಗುವುದು. ಅಶುಭವಿದ್ದಲ್ಲಿ ಶುಭವು ತೋರಿತು. ಅಂದರೆ ಶುಭಾಶುಭಗಳೆರಡೂ ಇಲ್ಲವೆಂದರ್ಥ. ಬಂಧವಿದ್ದಲ್ಲಿ ಅದರ ನಿವೃತ್ತಿರೂಪವಾದ ಮೋಕ್ಷವಾಗಬೇಕು. ಬಂಧ ವಿಲ್ಲದ್ದರಿಂದ ಮೋಕ್ಷವು ಇಲ್ಲ.

ಮಂತ್ರ : ಮರಣಂ ಯದಿ ಚೇಜ್ಜನ್ಮಜನ್ಮಾಭಾವೇ ಮೃತಿರ್ನ ಚ ।
ಬಹ್ಮಮಾತ್ರಂ ಕೇವಲಂ ಚಾಹಂ ನಾಸ್ತ್ಯನಾತ್ಮೇತಿ ನಿಶ್ಚಿನು ।
ಚಿತ್ತಂ ಪ್ರಪಂಚಮಿತ್ಯಾಹುರ್ನಾಸ್ತಿ ನಾಸ್ತ್ಯೇವ ಸರ್ವದಾ ॥ ೩೮ ॥

ಟೀಕಾ : ಮರಣವಿದ್ದರೆ ಅವನಿಗೆ ಜನ್ಮವನ್ನು ಹೇಳಬಹುದು. ಜನ್ಮವಿಲ್ಲದ್ದರಿಂದ ಮರಣವೂ ಇಲ್ಲ. ಈ ಜಗತ್ತೆಲ್ಲಾ ಬ್ರಹ್ಮಮಾತ್ರವು. ನಾನು ನೀನೂ ಕೂಡ ಬ್ರಹ್ಮವೇ ಕೇವಲ ಚಿನ್ಮಾತ್ರವಸ್ತುವೇ ನಾನೆಂದು ತಿಳಿ. ಮತ್ತು ದೇಹೇದ್ರಿಯ ಭೂತಾದ್ಯನಾತ್ಮವರ್ಗವನ್ನು ಇಲ್ಲವೆಂದೇ ತಿಳಿಯುವವನಾಗು.

ಮಂತ್ರ : ಯದ್ಯದ್ಧ್ಯಾಯತಿ ಚಿತ್ತೇನ ಯದ್ಯತ್ಸಂಕಲ್ಪತೇ ಕ್ವಚಿತ್ ।
ಯದ್ಯದ್ವಾಚಾ ವ್ಯಾಕರೋತಿ ಯದ್ಯದಾಚಾರ್ಯ ಭಾಷಣಂ।
ಯದ್ಯತ್ಸರ್ವೇಂದ್ರಿಯೈ ರ್ಭಾವ್ಯಂ ಯದ್ಯನ್ಮೀಮಾಂಸ್ಯತೇ ಪೃಥಕ್ ॥ ೩೯ ॥

ಟೀಕಾ : ಯಾವುದು ಯಾವುದು ಮನಸ್ಸಿನಿಂದ ಧ್ಯಾನ ಮಾಡ

ಲ್ಪಡುವುದೋ, ಯಾವುದ್ಯಾವುದು ಸಂಕಲ್ಪಿಸಲ್ಪಪಡುತ್ತದೆಯೋ, ಯಾವು ದ್ಯಾವುದು ಬಾಯಿಯಿಂದ ಹೇಳಲ್ಪಡುವುದೋ, ಯಾವು ದ್ಯಾವುದು ಪೂರ್ವಾಚಾರ್ಯರಿಂದ ಹೇಳಲ್ಪಟ್ಟಿರುವುದೋ ಅದು ಬೇರೆ ಬೇರ ಭಾವಗಳಿಂದ ನಿರ್ಣಯಿಸಲ್ಪಟ್ಟಿರುವುದು.

ಮಂತ್ರ : ಶಿವಃ ಕ್ಷರತಿ ಲೋಕಾನ್ವೈ ವಿಷ್ಣುಃ ಪಾತಿ ಜಗತ್ರಯಮ್ ।
ಬ್ರಹ್ಮಾಸೃಜತಿ ಲೋಕಾನ್ವೈ ಏವಮಾದಿ ಕ್ರಿಯಾದಿಕಮ್॥
ಯದ್ಯದಸ್ತಿ ಪುರಾಣೇಷು ಯದ್ಯದ್ವೇದೇಷು ನಿಶ್ಚಯಮ್।
ಸರ್ವೋಪನಿಷದಾಂ ಭಾವಂ ಸರ್ವಂ ಶಶವಿಷಾಣವತ್ ॥೪೦॥

ಟೀಕಾ : ಶಿವನು ಲೋಕಗಳನ್ನು ಸಂಹರಿಸುವನೆಂಬುವುದು, ವಿಷ್ಣುವು ಜಗತ್ತನ್ನು ರಕ್ಷಿಸುವನೆಂಬುವುದೂ, ಬ್ರಹ್ಮನು ಸೃಷ್ಟಿ ಮಾಡುತ್ತಾನೆಂಬುವುದೂ, ಇವೇ ಮುಂತಾದ ಕ್ರಿಯೆಗಳೆಲ್ಲವೂ ಯಾವ ಪುರಾಣಾದಿಗಳಲ್ಲಿರುವದೋ ಯಾವುದು ಯಾವುದು ವೇದಗಳಲ್ಲಿ ನಿಶ್ಚಯಿಸಲ್ಪಟ್ಟಿದೆಯೋ, ಅವುಗಳೆಲ್ಲ ಮೊಲಕ್ಕೆ ಕೋಡಿದೆ ಎಂಬಂತೆ ಸುಳ್ಳು.

ಮಂತ್ರ : ದೇಹೋಽಹಮಿತಿ ಸಂಕಲ್ಪೋ ಮಹತ್ಸಂಸಾರ ಉಚ್ಯತೇ ।
ದೇಹೋಽಹಮಿತಿ ಸಂಕಲ್ಪೋ ಹೃದಯಗ್ರಂಥಿರೀರಿತಃ ।
ದೇಹೋಽಹಮಿತಿ ಯಾ ಬುದ್ಧಿಃ ಸಾ ಚಾವಿದ್ಯೇತಿ ಭಣ್ಯತೇ।
ದೇಹೋಽಹಮಿತಿ ಯಜ್ಜ್ಞಾನಂ ತದೇವದ್ವೈತಮುಚ್ಯತೇ।
ದೇಹೋಽಹಮಿತಿ ಸಂಕಲ್ಪೋ ಮಹಾಪಾಪಮಿತಿ
ಸ್ಫುಟಮ್ ॥೧೪॥

ಟೀಕಾ : ದೇಹವು ನಾನು ಎಂಬ ಮಹಾಸಂಕಲ್ಪವೇ ದೊಡ್ಡ ಸಂಸಾರವೆಂದು ಹೇಳಲ್ಪಡುವುದು. ದೇಹವೇ ನಾನೆಂಬ ಸಂಕಲ್ಪವೇ ಹೃದಯಗ್ರಂಥಿ ಎನಿಸುವುದು. ದೇಹ ನಾನು ಎಂಬ ಸಂಕಲ್ಪ ಯಾವುದುಂಟೋ ಅದೇ ಅವಿದ್ಯೆ ಎನಿಸುವುದು. ದೇಹ ನಾನೆಂಬ ಯಾವ ಜ್ಞಾನ ಉಂಟೋ ಅದೇ ದ್ವೈತವೆನಿಸುವುದು. ದೇಹ ನಾನು ಎಂಬ ಸಂಕಲ್ಪವು ಯಾವುದೋ ಅದೇ ಮಹಾಪಾಪವೂ ಆಗಿದೆ.

**ಬಳಿಕ ನಾದಬಿಂದೋಪನಿಷತ್ತಿನ ತಾತ್ಪರ್ಯವು ಹೇಳಲ್ಪಡುತ್ತದೆ**

**ಮಂತ್ರ :** ಆನಂದಂ ಸತತಂ ಜ್ಞಾತ್ವಾ ಕಾಲಂ ನಯ ಮಹಾಮತೇ ।
ಪ್ರಾರಬ್ಧಮಖಿಲಂ ಭುಂಜನ್ನೋದ್ವೇಗಂ
ಕರ್ತುಮರ್ಹಸಿ ॥೪೨॥

ಟೀಕಾ : ಸರ್ವವ್ಯಾಪಕನಾದ ನಿನ್ನ ಸ್ವರೂಪಾನಂದವನ್ನು ತಿಳಿದವನಾಗಿ ಪ್ರಾರಬ್ಧವನ್ನನುಭವಿಸುವವನಾಗಿಯೂ ಮಮಕಾರವು ಉಂಟಾಗದಂತೆ ನಿಜಾನಂದದಲ್ಲಿಯೇ ಬುದ್ಧಿಯನ್ನು ನೆಲೆಗೊಳಿಸಬೇಕು.

**ಮಂತ್ರ :** ಉತ್ಪನ್ನೇ ಚಾತ್ಮವಿಜ್ಞಾನೇ ಪ್ರಾರಬ್ಧಂ ನೈವಮುಂಚತಿ ।
ತತ್ತ್ವಜ್ಞಾನೋದಯಾತ್ ಊರ್ಧ್ವಂ ಪ್ರಾರಬ್ಧಂ
ನೈವ ವಿದ್ಯತೇ ।
ದೇಹಾದೀನಾಮಸತ್ತ್ವಾತ್ತು ಯಥಾ ಸ್ವಪ್ನೇ
ವಿಬೋಧತಃ ॥೪೩॥

ಟೀಕಾ : ಆತ್ಮಜ್ಞಾನ ಉಂಟಾದಾಗ್ಯೂ ಪ್ರಾರಬ್ಧವು ಬಿಡುವುದಿಲ್ಲ. ವಿಚಾರಿಸಿ ನೋಡಿದರೆ ದೇಹಾದ್ಯನಾತ್ಮ ವಸ್ತುವು ಇಲ್ಲದ್ದರಿಂದ ಎಚ್ಚೆತ್ತ ಪುರುಷನಿಗೆ ಸ್ವಪ್ನದಲ್ಲಿ ಉಂಟಾಗಿದ್ದ ಕೊಲೆ ಮೊದಲಾದವು ಹೇಗೆ ಇಲ್ಲವೇ ಇಲ್ಲವೋ, ಹಾಗೆ ಆತ್ಮಜ್ಞಾನ ಉಂಟಾದ ಮೇಲೆ ಪ್ರಾರಬ್ಧವೇ ಇಲ್ಲವು.

**ಬಳಿಕಬ್ರಹ್ಮವಿದ್ಯೋಪನಿಷತ್ತಿನ ಸಾರವು ಹೇಳಲ್ಪಡುತ್ತದೆ.**

**ಮಂತ್ರ** : ಯೋ ದದಾತಿ ಮಹಾವಿದ್ಯಾಂ ಹಂಸಾಖ್ಯಾಂ
ಪಾರಮೇಶ್ವರೀಮ್
ತಸ್ಯ ದಾಸ್ಯಂ ಸದಾ ಕುರ್ಯಾತ್ ಪ್ರಜ್ಞಯಾ
ಪರಯಾ ಸಹ ॥ ೪೪ ॥

ಟೀಕಾ : ಜೀವಬ್ರಹ್ಮರ ಐಕ್ಯರೂಪವಾದ ಮಹಾವಿದ್ಯೆಯನ್ನು ಯಾವನು ಹೇಳುತ್ತಾನೋ, ಅಂತಹ ಗುರುವಿನ ಪಾದಸೇವೆಯನ್ನು ಸರ್ವಕಾಲದಲ್ಲೂ ಸಂತೋಷದಿಂದ ಶಿಷ್ಯನಾದವನು ಬೇಸರವಿಲ್ಲದೆ ಮಾಡಬೇಕು

**ಮಂತ್ರ** : ಶುಭಂ ವಾಽಶುಭಮನ್ಯದ್ವಾ ಯದುಕ್ತಂ ಗುರುಣಾ ಭುವಿ ।
ತತ್ಕುರ್ಯಾತ್ ಅವಿಚಾರೇಣ ಶಿಷ್ಯಃ
ಸಂತೋಷಸಂಯುತಃ ॥ ೪೫ ॥

**ಟೀಕಾ : ಜಗತ್ತಿನಲ್ಲಿ ಒಳ್ಳೆಯದಾಗಲೀ ಅಥವಾ ಕೆಟ್ಟದ್ದಾಗಲೀ ಗುರುವಿನಿಂದ ಯಾವುದು ಹೇಳಲ್ಪಡುತ್ತದೆಯೊ, ಅದನ್ನು ಶಿಷ್ಯನು ಶಂಕಿಸದೇ ಸಂತೋಷಚಿತ್ತನಾಗಿ ಮಾಡಬೇಕು.**

ಮಂತ್ರ : ದೇಹಜಾತ್ಯಾದಿ ಸಂಬಂಧಾನ್ ವರ್ಣಾಶ್ರಮ
ಸಮನ್ವಿತಾನ್ ।
ವೇದಶಾಸ್ತ್ರಾಣಿ ಚಾನ್ಯಾನಿ ಪದಪಾಂಸುಮಿವ
ತ್ಯಜೇತ್ ॥ ೪೬ ॥

ಟೀಕಾ : ಬ್ರಾಹ್ಮಣಾದಿ ವರ್ಣಗಳನ್ನು ಬ್ರಹ್ಮಚರ್ಯಾಶ್ರಮಾದಿ ಧರ್ಮಗಳನ್ನು ಇವುಗಳಿಂದ ಉಂಟಾಗಿರುವ ದೇಹ ಜಾತ್ಯಾದಿ ಸಂಬಂಧ ಗಳನ್ನು ಇವುಗಳನ್ನು ಬೋಧಿಸುವ ವೇದಶಾಸ್ತ್ರ ಪುರಾಣಾದಿಗಳನ್ನೂ ಕೂಡ ಕಾಲಿನ ಧೂಳಿನಂತೆ ತ್ಯಜಿಸತಕ್ಕದ್ದು.

ಮಂತ್ರ : ಗುರುಭಕ್ತಿಂ ಸದಾ ಕುರ್ಯಾಚ್ಛ್ರೇಯಸೇ ಭೂಯಸೇ ನರಃ ।
ಗುರುರೇವ ಹರಿಃ ಸಾಕ್ಷಾನ್ನಾನ್ಯ
ಇತ್ಯಬ್ರವೀಚ್ಛ್ರುತಿಃ ॥ ೪೭ ॥

ಟೀಕಾ : ಮುಮುಕ್ಷುವಾದ ಪುರುಷನು ತನ್ನ ಮೋಕ್ಷಪ್ರಾಪ್ತಿ ಗಾಗಿ ಯಾವಾಗಲೂ ಗುರುಭಕ್ತಿಯನ್ನು ಎಡಬಿಡದೆ ಸಾಧಿಸಬೇಕು. ಗುರುವೇ ಸಾಕ್ಷಾತ್ ಶ್ರೀಹರಿಯು. ಗುರುವಿಗಿಂತ ಬೇರೆ ದೇವರಿಲ್ಲವು.

ಮಂತ್ರ : ಗೃಹಸ್ಥೋ ಬ್ರಹ್ಮಚಾರೀ ಚ ವಾನಪ್ರಸ್ಥಶ್ಚ ಭಿಕ್ಷುಕಃ ।
ಯತ್ರ ಯತ್ರ ಸ್ಥಿತೋ ಜ್ಞಾನೀ ಪರಮಾಕ್ಷರವಿತ್ಸದಾ ।
ಬ್ರಹ್ಮಹತ್ಯಾಶ್ವಮೇಧಾದ್ಯೈಃ
ಪುಣ್ಯಪಾಪೈರ್ನಲಿಪ್ಯತೇ ॥ ೪೮ ॥

ಟೀಕಾ : ಗ್ರಹಸ್ಥನಾಗಲೀ, ಬ್ರಹ್ಮಚಾರಿಯಾಗಲೀ, ವಾನಪ್ರಸ್ಥಾ

ಶ್ರಮಿಯಾಗಲೀ, ಸಂನ್ಯಾಸಿಯಾಗಲಿ, ಅವನು ಯಥಾರ್ಥ ಜ್ಞಾನಿಯಾಗಿದ್ದ ಪಕ್ಷವಲ್ಲಿ ಎಲ್ಲಿದ್ದರೂ ಬ್ರಹ್ಮಹತ್ಯ ಮಾಡಿದ ಪಾಪದಿಂದಲೂ, ಅಶ್ವಮೇಧ ಯಜ್ಞಮಾಡಿದ ಪುಣ್ಯದಿಂದಲೂ, ಮಿಶ್ರಕರ್ಮದಿಂದಲೂ ಲಿಪ್ತನಾಗುವುದಿಲ್ಲ.

ಮಂತ್ರ : ಚೋದಕೋ ಬೋಧಕಶ್ಚ ಮೋಕ್ಷದಶ್ಚ ಪರಸ್ಮೃತಃ ।
ಇತ್ಯೇಷಾಂ ತ್ರಿವಿಧೊ ಜ್ಞೇಯ ಆಚಾರ್ಯಸ್ತು
ಮಹೀತಲೇ ॥೪೯॥

ಟೀಕಾ : ಚೋದಕ ಗುರು, ಬೋಧಕಗುರು, ಮೋಕ್ಷದ ಗುರು ಎಂಬುದಾಗಿ ಗುರುಗಳಲ್ಲಿ ಮೂರು ವಿಧವು.

ಮಂತ್ರ : ಚೋದಕೋ ದರ್ಶಯೆನ್ಮಾರ್ಗಂ ।
ಬೊಧಕಸ್ಸ್ಥಾನಮಾಚರೇತ್ ಮೋಕ್ಷದಸ್ತು ಪರಂ ತತ್ತ್ವಂ
ಯಜ್ಜ್ಞಾತ್ವಾ ಪರಮಶ್ನುತೇ॥ ॥೫೦॥

ಟೀಕಾ : ಯಾವನು ನಿಷ್ಕಾಮ ಕರ್ಮವನ್ನು ಬೋಧಿಸುವನೋ ಅವನು ಚೋದಕ ಗುರುವು. ಬ್ರಹ್ಮಸ್ವರೂಪವನ್ನು ಬೋಧಿಸುವವನು ಬೋಧಕ ಗುರುವು. ಯಾವುದರ ಸಾಕ್ಷಾತ್ಕಾರದಿಂದ ಜೀವಾತ್ಮನ ಜೀವತ್ವವು ನಾಶವಾಗಿ ನಿತ್ಯನಿರತಿಶಯಾನಂದವನ್ನು ಪಡೆಯುವನೋ, ಅಂತಹ ಸಾಕ್ಷಾತ್ಕಾರವನ್ನುಂಟುಮಾಡುವ ಗುರುವನ್ನು ಮೋಕ್ಷದಾಯಕನೆಂದು ತಿಳಿಯತಕ್ಕದ್ದು.

**ಬಳಿಕ, ಯೋಗತತ್ತ್ವೋಪನಿಷತ್ತಿನ ಸಾರವು ಹೇಳಲ್ಪಡುತ್ತದೆ.**

**ಮಂತ್ರ :** ಯದ್ಯತ್ಪಶ್ಯತಿ ಚಕ್ಷುರ್ಭ್ಯಾಂ ತತ್ತದಾತ್ಮೇತಿ ಭಾವಯೇತ್ ॥
ಯದ್ಯಚ್ಛೃಣೋತಿ ಕರ್ಣಾಭ್ಯಾಂ ತತ್ತದಾತ್ಮೇತಿ
ಭಾವಯೇತ್ ॥೫೦॥

ಟೀಕಾ : ಯಾವ ಯಾವುದು ಕಣ್ಣಿನಿಂದ ನೋಡಲ್ಪಡುತ್ತದೆಯೋ, ಅದನ್ನೆಲ್ಲಾ ಆತ್ಮವೆಂದೇ ತಿಳಿಯಬೇಕು. ಯಾವ ಯಾವುದು ಕಿವಿಗಳಿಂದ ಕೇಳಲ್ಪಡುತ್ತದೆಯೋ, ಅದೆಲ್ಲವೂ ಆತ್ಮವೆಂದೇ ತಿಳಿಯತಕ್ಕದ್ದು.

**ಮಂತ್ರ :** ಲಭತೇ ನಾಸಯಾ ಯದ್ಯತ್ತತ್ತದಾತ್ಮೇತಿ ಭಾವಯೇತ್ ॥
ಜಿಹ್ವಯಾ ಯದ್ರಸಂ ಹ್ಯತ್ತಿ ತತ್ತದಾತ್ಮೇತಿ
ಭಾವಯೇತ್ ॥೫೨॥

ಟೀಕಾ : ಮೂಗಿನಿಂದ ಯಾವ ಯಾವುದು ಮೂಸಿಸಲ್ಪಡುತ್ತದೆಯೋ ಅದೆಲ್ಲವನ್ನು ಆತ್ಮನೆಂದೇ ತಿಳಿಯಬೇಕು. ನಾಲಿಗೆಯಿಂದ ಯಾವ ರಸವು ಸವಿಯಲ್ಪಡುತ್ತದೆಯೋ ಅದೆಲ್ಲವನ್ನು ಆತ್ಮನೆಂದೇ ತಿಳಿಯಬೇಕು.

**ಬಳಿಕ, ಆತ್ಮಬೋಧೋಪನಿಷತ್ತಿನ ಸಾರವು ಹೇಳಲ್ಪಡುತ್ತದೆ.**

**ಮಂತ್ರ :** ಘಟಾವಭಾಸಕೋ ಭಾನುಃ ಘಟನಾಶೇ ನ ನಶ್ಯತಿ ।
ದೇಹೋಽವಭಾಸಕಃ ಸಾಕ್ಷೀ ದೇಹನಾಶೇ ನ ನಶ್ಯತಿ ॥೫೩॥

ಟೀಕಾ : ಮಡಕೆಯನ್ನು ಬೆಳಗುವ ಸೂರ್ಯನು ಮಡಕೆ ನಾಶ

ವಾದಾಗ್ಯೂ ಹೇಗೆ ನಾಶವಾಗುವುದಿಲ್ಲವೋ, ಹಾಗೆಯೇ ದೇಹ ನಾಶ ವಾದಾಗ್ಯೂ ದೇಹವನ್ನು ಬೆಳಗುವ ಸಾಕ್ಷಿಯು ನಾಶವಾಗುವುದಿಲ್ಲ.

**ಮಂತ್ರ :** ನ ಮೇ ಬಂಧೋ ನ ಮೇ ಮುಕ್ತಿಃ ನ ಮೇ ಶಾಸ್ತ್ರಂ
ನ ಮೇ ಗುರುಃ ।
ಮಾಯಾಮಾತ್ರ ವಿಕಾಸತ್ವಾತ್
ಮಾಯಾತೀತೋಽಹಮದ್ವಯಃ ॥೫೪॥

ಟೀಕಾ : ನನಗೆ ಬಂಧವಿಲ್ಲ, ನನಗೆ ಮುಕ್ತಿಯಿಲ್ಲ, ನನಗೆ ಶಾಸ್ತ್ರವಿಲ್ಲ, ನನಗೆ ಗುರುವಿಲ್ಲ, ಇವೆಲ್ಲವೂ ಕೇವಲ ಮಾಯಾ ವಿಕಾಸ ವಾದ್ದರಿಂದ ನಾನು ಕೇವಲ ಅದ್ವಯನಾಗಿರುವೆನು. ॥೫೪॥

**ಮಂತ್ರ :** ಪ್ರಾಣಾಶ್ಚಲಂತು ತದ್ಧರ್ಮೈಃ ಕಾಮೈರ್ವಾ
ಹನ್ಯತಾಂ ಮನಃ ।
ಸ್ವಭಾವಾನಂದಪೂರ್ಣಸ್ಯ ಮಮ ದುಃಖ ಕಥಂ
ಭವೇತ್ ॥೫೫॥

ಟೀಕಾ : ಪ್ರಾಣಗಳು ಅವುಗಳ ಧರ್ಮದಿಂದ ಚಲಿಸುತ್ತಿರಲಿ, ಅಥವಾ ಸಂಕಲ್ಪಾದಿಗಳ ತ್ಯಾಗದಿಂದ ಮನಸ್ಸು ಕೊಲ್ಲಲ್ಪಡಲಿ, ಸ್ವಭಾವ ದಿಂದ ಆನಂದಪರಿಪೂರ್ಣವಾದ ನನಗೆ ಇವುಗಳಿಂದ ದುಃಖ ಹೇಗೆ ಉಂಟಾದೀತು !!

**ಮಂತ್ರ :** ಆತ್ಮಾನಮಂಜಸಾ ವೇದ್ಮಿ ಕ್ವಾಪ್ಯಜ್ಞಾನಂ ಪಲಾಯಿತಮ್।
ಕರ್ತೃತ್ವಮಪಿ ಮೇ ನಷ್ಟಂ ಕರ್ತವ್ಯಂ ವಾಪಿ ನ
ಕ್ವಚಿತ್ ॥೫೬॥

ಟೀಕಾ : ನನ್ನ ನಿಜಸ್ವರೂಪವನ್ನು ಜಾಗ್ರತೆಯಾಗಿ ತಿಳಿದು ಕೊಂಡೆನು. ಅಜ್ಞಾನವು ಎಲ್ಲಿಯೋ ಓಡಿಹೋಯಿತು. ನನಗೆ ಕತೃತ್ವವೂ ಕೂಡ ನಷ್ಟವಾಯಿತು. ಮಾಡತಕ್ಕ ಕರ್ತವ್ಯವು ಸ್ವಲ್ಪವೂ ಇಲ್ಲವಾಯಿತು.

**ಮಂತ್ರ** : ಬ್ರಾಹ್ಮಣಾಂ ಕುಲಗೋತ್ರೇ ಚ ನಾಮಸೌಂದರ್ಯ
ಜಾತಯಃ ।
ಸ್ಥೂಲದೇಹಗತಾ ಏತೇ ಹ್ಯಲಿಂಗಸ್ಯ ನ ವಿದ್ಯತೇ ॥೫೭॥

ಟೀಕಾ : ಬ್ರಾಹ್ಮಣ ಕುಲ, ಗೋತ್ರ, ನಾಮ, ಸೌಂದರ್ಯ, ಜಾತಿಗಳು ಇವೆಲ್ಲಾ ಸ್ಥೂಲಶರೀರವನ್ನು ಹೊಂದಿದ ವಿಕಾರಗಳು ಶರೀರಾತೀತನಾದ ನನಗೆ ಕುಲ, ಗೋತ್ರ, ಜಾತಿ, ಸಂಪರ್ಕ ಯಾವುದೂ ಇಲ್ಲ.

**ಮಂತ್ರ** : ಜಡತ್ವಪ್ರಿಯಮೋದತ್ವ ಧರ್ಮಾಃ ಕಾರಣದೇಹಗಾಃ ।
ನ ಸಂತಿ ಮಮ ನಿತ್ಯಸ್ಯ ನಿರ್ವಿಕಾರ ಸ್ವರೂಪಿಣಃ ॥೫೮॥

ಟೀಕಾ : ಜಡತ್ವ. ಪ್ರಿಯತ್ವ, ಮೋದತ್ವ, ಈ ಧರ್ಮಗಳೆಲ್ಲವೂ ಕಾರಣದೇಹದ ಧರ್ಮಗಳಾಗಿವೆ. ನಿತ್ಯಸ್ವರೂಪನೂ, ನಿರ್ವಿಕಾರಿಯೂ ಆದ ನನಗೆ ಯಾವುದೂ ಇಲ್ಲ.

**ಮಂತ್ರ** : ಉಲೂಕಸ್ಯ ಯಥಾಭಾನುರಂಧಕಾರಃ ಪ್ರತೀಯತೇ ।
ಸ್ವಪ್ರಕಾಶೇ ಪರಾನಂದೇ ತಮೋ ಮೂಢಸ್ಯ
ಜಾಯತೇ । ॥೫೯॥

ಟೀಕಾ : ಗೂಬೆಗಳಿಗೆ ಸೂರ್ಯನು ಹೇಗೆ ಕತ್ತಲೆಯಂತೆ ಕಾಣ

ತ್ತಾನೆಯೋ, ಹಾಗೆ ಮೂಢನಿಗೆ ಸ್ವಯಂಪ್ರಕಾಶನಾಗಿಯೂ, ನಿತ್ಯಾನಂದ ಮಯನಾಗಿಯೂ ಇರುವ ತನ್ನ ಸ್ವರೂಪದಲ್ಲಿ ಕಗ್ಗತ್ತಲೆಯಂತೇ ಕಾಣುತ್ತದೆ.

ಮಂತ್ರ : ಚಕ್ಷುರ್ದೃಷ್ಟಿನಿರೋಧೇಽಭ್ರೈಃ ಸೂರ್ಯೋ ನಾಸ್ತೀತಿ
ಮನ್ಯತೇ ।
ತಥಾಽಜ್ಞಾನಾವೃತೋ ದೇಹೀ ಬ್ರಹ್ಮನಾಸ್ತೀತಿ
ಮನ್ಯತೇ ॥ ೬೦ ॥

ಟೀಕಾ : ಮೋಡ ಮುಚ್ಚಿಕೊಂಡು ಕಣ್ಣಿನ ದೃಷ್ಟಿಯು ಸೂರ್ಯನವರೆಗೂ ವ್ಯಾಪಿಸುವುದಕ್ಕೆ ಅವಕಾಶವಿಲ್ಲದಂತೆ ತಡೆದಿರಲು ಸೂರ್ಯನು ಇಲ್ಲವೆಂದು ಮೂಢನು ಹೇಗೆ ತಿಳಿಯುತ್ತಾನೆಯೋ, ಹಾಗೆಯೇ ಅಜ್ಞಾನದಿಂದ ಆವೃತನಾದ ಜೀವನು ಜೀವತ್ವಾಧಿಷ್ಠಾನ ಕೂಟಸ್ಥ ಚೈತನ್ಯವನ್ನು ಇಲ್ಲವೆಂದು ತಿಳಿದಿರುವನು.

ಮಂತ್ರ : ಯಥಾಮೃತಂ ವಿಷಾದ್ಭಿನ್ನಂ ವಿಷದೋಷೈಃ ನ ಲಿಪ್ಯತೇ ।
ನ ಸ್ಪೃಶಾಮಿ ಜಡಾದ್ಭಿನ್ನೋ
ಜಡದೋಷಾನ್ಪ್ರಕಾಶತಃ ॥ ೬೧ ॥

ಟೀಕಾ : ವಿಷಕ್ಕೆ ಭಿನ್ನವಾಗಿರುವ ಅಮೃತವು ವಿಷದೋಷದಿಂದ ಹೇಗೆ ಲೇಪಿತವಾಗುವುದಿಲ್ಲವೋ, ಹಾಗೆಯೇ ಜಡದೇಹಕ್ಕೆ ಭಿನ್ನನಾದ ಜಡವಸ್ತುಗಳನ್ನು ಅರಿಯುವ ನಾನು ಜಡದೋಷಗಳನ್ನು ಹೊಂದತಕ್ಕವನಲ್ಲ.

ಮಂತ್ರ : ಸ್ವಲ್ಪಾಪಿ ದೀಪಕಣಿಕಾ ಬಹುಲಂ ನಾಶಯೇತ್ತಮಃ ।
ಸ್ವಲ್ಪೋಽಬೋಧೋಽಪ್ಯಜ್ಞಾನಂ ಬಹುಲಂ
ನಾಶಯೇತ್ತಥಾ ॥ ೬೨ ॥

ಟೀಕಾ : ದೀಪದ ಕಡ್ಡಿಯು ಸಣ್ಣದಾಗಿದ್ದರೂ ಮಹತ್ತರವಾದ ಕತ್ತಲೆಯನ್ನು ನಾಶಪಡಿಸುವುದು. ಅದರಂತೆ ಆತ್ಮಜ್ಞಾನವು ಒಮ್ಮೆ ಉಂಟಾದಾಗ್ಯೂ ದೊಡ್ಡದೆನಿಸಿರುವ ಅಜ್ಞಾನವನ್ನು ಧ್ವಂಸಪಡಿಸುವುದು.

**ಬಳಿಕ ನಾರದ ಪರಿವ್ರಾಜಕೋಪನಿಷತ್ತಿನ ಸಾರವು**

ಮಂತ್ರ : ಶ್ರುತ್ವಾ ಸ್ಪೃಷ್ಟ್ವಾ ಚ ಭುಕ್ತ್ವಾ ಚ ದೃಷ್ಟ್ವಾ
ಘ್ರಾತ್ವಾ ಚ ಯೋ ನರಃ ।
ನ ಹೃಷ್ಯತಿ ಗ್ಲಾಯತಿ ಯಃ ಸ ವಿಜ್ಞೇಯೋ
ಜಿತೇಂದ್ರಿಯಃ ॥ ೬೩ ॥

ಟೀಕಾ : ಶಬ್ದವನ್ನು ಕೇಳಿಯೂ, ಸ್ಪರ್ಶವನ್ನು ಸೋಂಕಿಯೂ, ರೂಪುಗಳನ್ನು ನೋಡಿಯೂ, ರಸವನ್ನು ರುಚಿಸಿಯೂ, ಗಂಧವನ್ನು ಮೂಸಿಯೂ, ಯಾವ ಪುರುಷನು ಹರ್ಷದುಃಖಗಳನ್ನು ಹೊಂದುವುದಿಲ್ಲವೋ, ಆ ಮನುಷ್ಯನನ್ನು ಜಿತೇಂದ್ರಿಯನೆಂಬುದಾಗಿ ತಿಳಿಯಬೇಕು.

ಮಂತ್ರ : ಮಾಂಸಾಸೃಕ್ ಪೂಯ ವಿಣ್ಮೂತ್ರ
ಸ್ನಾಯುಮಜ್ಜಾಸ್ಥಿಸಂಹತಾ ।
ದೇಹೇ ಚೇತ್ಪ್ರೀತಿರ್ಮೂಢೋ ಭವಿತಾ
ನರಕೇಽಪಿ ಸಃ ॥ ೬೪ ॥

ಟೀಕಾ : ಮಾಂಸ, ರಕ್ತ, ಅಮೇಧ್ಯ, ಮೂತ್ರ, ಕೀವು, ನರ, ಮೂಳೆ, ಇವುಗಳ ಪಂಜರವೆನಿಸುವ ಈ ಶರೀರವಲ್ಲಿ ನಾನು ಎಂಬ ಪ್ರೀತಿ ಯುಳ್ಳವನೇ ಮೂಢನು ಅವನ ಭಾವನೆಯಂತೆ ಅವನು ಅಮೇಧ್ಯ ಕೂಪದಲ್ಲಿ ಬೀಳುವನು.

ಮಂತ್ರ : ಸಾ ಕಾಲಸೂತ್ರಪದವೀ ಸಾ ಮಹಾಯಾವೀಚಿವಾಗುರಾ ।
ಸಾಸಿಪತ್ರವನಶ್ರೇಣೀ ಯಾ ದೇಹೋಽಹಮಿತಿ
ಸ್ಥಿತಿಃ ॥ ೬೫ ॥

ಟೀಕಾ : ದೇಹವೇ ನಾನೆಂಬ ಯಾವ ಭಾವನೆಯಿದೆಯೋ, ಅದೇ ಯಮನ ಸೂತ್ರದ ಪದ್ಧತಿಯು, ಅದೇನೆ ಬಂಧನದ ಬಲೆಯು. ಅದೇ ಮಹಾಯಾತನೆಯನ್ನುಂಟುಮಾಡುವ ಅಸಿಪತ್ರವನವೆಂಬುದರ ನರಕ ಶ್ರೇಣಿಯು.

ಮಂತ್ರ : ಸಾ ತ್ಯಾಜ್ಯಾ ಸರ್ವಯತ್ನೇನ ಸರ್ವನಾಶೇಽಪ್ಯುಪಸ್ಥಿತೇ ।
ಸ್ಪ್ರಷ್ಟವ್ಯಾ ಸಾ ನ ಭವ್ಯೇನ ಸಶ್ವಮಾಂಸೇವ
ಪುಲ್ಕಸೀ ॥ ೬೬ ॥

ಟೀಕಾ : ದೇಹವೇ ನಾನೆಂಬ ಭಾವನೆಯನ್ನು ಬಿಡಬೇಕೆಂದು ಹೇಳುತ್ತಾರೆ. ಗೃಹ, ಪತ್ನಿ, ಹೊಲ, ಹಣ, ಪುತ್ರಾದಿ ಸಮಸ್ತವೂ ನಾಶವಾದಾಗಲೂ ಸರ್ವಪ್ರಯತ್ನದಿಂದ ದೇಹವೇ ನಾನೆಂಬ ಭಾವನೆ ಯನ್ನು ಬಿಡತಕ್ಕದ್ದು. ಸದ್ಬ್ರಾಹ್ಮಣನೆನಿಸಿದವನು ನಾಯಿಯ ಮಾಂಸ ವನ್ನು ತಿನ್ನುವ ಚಾಂಡಾಲ ಸ್ತ್ರೀಯರನ್ನು ದೂರದಲ್ಲಿ ಹೇಗೆ ತ್ಯಜಿಸು

ವನೋ, ಹಾಗೆಯೇ ದೇಹವೇ ನಾನೆಂದು ಮನಸ್ಸಿನಲ್ಲಿಯೂ ಸಹ ಮುಮುಕ್ಷುಗಳು ಸ್ಮರಿಸಕೂಡದು.

ಮಂತ್ರ : ಪ್ರಿಯೇಷು ಸ್ವೇಷು ಸುಕೃತಮಪ್ರಿಯೇಷು ಚ ದುಷ್ಕೃತಮ್
ವಿಸೃಜ್ಯ ಧ್ಯಾನಯೋಗೇನ ಬ್ರಹ್ಮಾಪ್ಯೇತಿ
ಸನಾತನಮ್ ॥ ೬೭ ॥

ಟೀಕಾ : ತನ್ನ ಪಾಪವನ್ನು ತನ್ನನ್ನು ನಿಂದಿಸುವವರಲ್ಲಿಯೂ ತನ್ನ ಪುಣ್ಯವನ್ನು ತನ್ನನ್ನು ಪೂಜಿಸುವವರಲ್ಲಿಯೂ ಬಿಟ್ಟು ಆತ್ಮಜ್ಞಾನದಿಂದ ಜ್ಞಾನಿಯು ಪರಮಪದವಿಯನ್ನು ಪಡೆಯುವನು.

ಮಂತ್ರ : ಯೇನ ಸರ್ವಮಿದಂ ಪ್ರೋತಂ ಸೂತ್ರೇಮಣಿಗಣಾ ಇವ ।
ತತ್ಸೂತ್ರಂ ಧಾರಯೇದ್ಯೋಗೀ ಯೋಗವಿತ್ತತ್ತ್ವ
ದರ್ಶನಃ ॥ ೬೮ ॥

ಟೀಕಾ : ದಾರದಲ್ಲಿ ಮಣಿಗಳಿರುವಂತೆ ಯಾವ ಸೂತ್ರದಿಂದ ಈ ನಾಮರೂಪಗಳೆಂಬ ಮಣಿಗಳು ಪೋಣಿಸಲ್ಪಟ್ಟಿವೆಯೋ, ಆ ಸೂತ್ರವನ್ನು ಯಾವನು ಧರಿಸುವನೋ, ಅವನೇ ವೇದಶಾಸ್ತ್ರಸಾರವನ್ನು ತಿಳಿದಿರುವ ಬ್ರಾಹ್ಮಣನೆನಿಸುವನು.

ಮಂತ್ರ : ಬಹಿಸ್ಸೂತ್ರಂ ತ್ಯಜೇದ್ವಿದ್ವಾನ್‌ಯೋಗ
ಮುತ್ತಮಮಾಸ್ಥಿತಃ ।
ಬ್ರಹ್ಮಭಾವಮಿದಂ ಸೂತ್ರಂ ಧಾರಯೇದ್ಯಃ ಸಚೇತನಃ :

ಧಾರಣಾತ್ತಸ್ಯ ಸೂತ್ರಸ್ಯ ನೋಚ್ಛಿಷ್ಟೋ ನಾ
ಶುಚಿರ್ಭವೇತ್
ಸೂತ್ರಮಂತರ್ಗತಂ ಯೇಷಾಂ ಜ್ಞಾನಯಜ್ಞೋಪ
ವೀತಿನಾಮ್ ।
ತೇ ವೈ ಸೂತ್ರವಿದೋ ಲೋಕೇ ತೇ ಚ
ಯಜ್ಞೋಪವೀತಿನಃ ।
ಶಿಖಾ ಜ್ಞಾನಮಯೀ ಯಸ್ಯ ಉಪವೀತಂ ಚ ತನ್ಮಯಮ್।
ಬ್ರಾಹ್ಮಣ್ಯಂ ಸಕಲಂ ತಸ್ಯ ಇತಿ ಬ್ರಹ್ಮವಿದೋ
ವಿದುಃ ಇತಿ ॥೬॥

ಟೀಕಾ : ಉತ್ತಮವಾದ ಶಿವಜೀವೈಕ್ಯ ಯೋಗವನ್ನು ಸಾಧಿಸಿ ಆದರಿಂದ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿದ ಜ್ಞಾನಿಯು ಹೊರಗಿನ ಸೂತ್ರವನ್ನು ತ್ಯಜಿಸುವನು. ಅವನೇ ಚೇತನ ಸ್ವರೂಪನು. ಈ ಬ್ರಹ್ಮ ಸೂತ್ರಧಾರಣೆಯಿಂದ ಒಪ್ಪುವ ಮಹಾತ್ಮನಿಗೆ ಉಚ್ಛಿಷ್ಟ ದೋಷವೂ ಇಲ್ಲವು. ಯಾರಿಗೆ ಸೂತ್ರವು ಅಂತರ್ಗತವಾಗಿದೆಯೋ, ಅವರು ಜ್ಞಾನ ಯಜ್ಞೋಪವೀತವುಳ್ಳವರು. ಶಿಖಾಯಜ್ಞೋಪವೀತವೆಂದರೆ ಜುಟ್ಟು ಜನಿವಾರ ಇವು ಎರಡೂ ಇರುವ ಪುರುಷನೇ ಬ್ರಾಹ್ಮಣನೆಂದು ಶಾಸ್ತ್ರದಲ್ಲಿ ಹೇಳಿರುವುದು ಸರಿಯಷ್ಟೆ ? ಆದರೆ ನಿಜವಾದ ಯಜ್ಞೋಪ ವಿತಲಕ್ಷಣವು ಈ ರೀತಿ ಇರುತ್ತದೆ; ಯಾವ ಪುರುಷನು ಜ್ಞಾನವೆಂಬ ಶಿಖೆಯನ್ನೂ, ಜ್ಞಾನಮಯವಾದ ಯಜ್ಞೋಪವೀತವನ್ನೂ ಧರಿಸಿರು

ಏವನೋ ಸಮಸ್ತ ಬ್ರಾಹ್ಮಣ್ಯವು ಅವನಲ್ಲಿಯೇ ಇರುವುದೆಂದು ಬ್ರಹ್ಮ ಜ್ಞಾನಿಗಳು ತಿಳಿದಿರುವರು.

**ಬಳಿಕ ಜ್ಞಾನಿಯು ನಡತೆಯು ಹೇಳಲ್ಪಡುತ್ತದೆ**

**ಮಂತ್ರ** : ಯಥೈನಮವಮನ್ಯಂತೇ ಜನಾಃ ಪರಿಭವಂತಿ ಚ ।
ತಥಾ ಯುಕ್ತಶ್ಚರೇದ್ಯೋಗೀ ಸ ತಾಂ ವರ್ತ್ಮ ನ
ದೂಷಯೇತ್ ॥೭೦॥

ಟೀಕಾ : ಯಾವ ರೀತಿ ಇದ್ದರೆ ಪ್ರಪಂಚದವರು ಅಪಮಾನ ಪಡಿಸುವರೋ, ಯಾವ ರೀತಿ ಇದ್ದರೆ ಜನಗಳು ನಿಂದಿಸುವರೋ, ಆ ರೀತಿಯಲ್ಲಿ ಆತ್ಮಜ್ಞಾನಿಯಾದ ಯೋಗಿಯು ನಡೆಯುತ್ತಾನೆ. ಆದ್ದ ರಿಂದ ಆ ಸತ್ಪುರುಷನನ್ನು ನೋಡಿ ದೂಷಿಸ ಕೂಡದು.

**ಮಂತ್ರ** : ಯಃ ಶರೀರೇಂದ್ರಿಯಾದಿಭ್ಯೋ ವಿಹೀನಂ ಸರ್ವಸಾಕ್ಷಿಣಮ್
ಪಾರಮಾರ್ಥಿಕವಿಜ್ಞಾನಂ ಸುಖಾತ್ಮಾನಂ ಸ್ವಯಂಪ್ರಭಮ್
ಪರತತ್ತ್ವಂ ವಿಜಾನಾತಿ ಸೋಽತಿವರ್ಣಾಶ್ರಮೀ
ಭವೇತ್ ॥೭೧॥

ಟೀಕಾ : ಯಾವನು ಶರೀರ, ಇಂದ್ರಿಯ, ಕರಣಾದಿಗಳಿಗೆ ವಿಲಕ್ಷಣನಾಗಿಯೂ, ಸರ್ವಸಾಕ್ಷಿಯಾಗಿಯೂ. ಪಾರಮಾರ್ಥಿಕಸ್ವರೂಪ ನಾಗಿಯೂ, ಅಖಂಡರೂಪನಾಗಿಯೂ ಇರುವ ಪಾರಮಾರ್ಥಿಕ ಸ್ವರೂಪವನ್ನು ತಿಳಿದಿರುವನೋ ಅವನೇ ಅತ್ಯಾಶ್ರಮಿಯೆಂದು ಕರೆಸಿ ಕೊಳ್ಳುತ್ತಾನೆ. ಅತ್ಯಾಶ್ರಮವೆಂದರೆ ಸನ್ಯಾಸವೆಂದರ್ಥ.

ಮಂತ್ರ : ವರ್ಣಾಶ್ರಮಾದಯೋ ದೇಹೇ ಮಾಯಯಾ ಪರಿಕಲ್ಪಿತಾಃ।
ನಾತ್ಮನೋ ಬೋಧರೂಪಸ್ಯ ಮಮ ತೇ ಸಂತಿ ಸರ್ವದಾ ।
ಇತಿ ಯೋ ವೇದ ವೇದಾಂತೈಃ ಸೋऽತಿವರ್ಣಾಶ್ರಮೀ
ಭವೇತ್ ॥೨೨॥

ಟೀಕಾ : ಸಕಲ ವರ್ಣಾಶ್ರಮ, ಜಾತಿ, ಕುಲಗೋತ್ರಗಳು ಮಾಯೆಯಿಂದ ದೇಹದಲ್ಲಿ ಕಲ್ಪಿಸಲಪಟ್ಟಿರುತ್ತವೆ. ಅವಸ್ಥಾ ಕ್ರಮಗಳಲ್ಲಿ ಹೆಚ್ಚು ಕಡಿಮೆಗಳಿಲ್ಲದೇ ಸಮಾನವಾಗಿರುವ ಚಿದ್ರೂಪನಾದ ಆತ್ಮನಿಗೆ ಈ ವರ್ಣಾಶ್ರಮಗಳು ಸಂಬಂಧಿಸುವುದಿಲ್ಲ. ಈ ರೀತಿಯಾಗಿ ವೇದಾಂತ ತತ್ತ್ವ ವಿಚಾರದಿಂದ ಯಾವನು ತಿಳಿದಿರುವನೋ ಅವನೇ ಸಂನ್ಯಾಸಿಯೆಂದು ನಿಶ್ಚಯಿಯಿಸತಕ್ಕದ್ದು.

ಮಂತ್ರ : ಯೋऽತೀತ್ಯ ಸ್ವಾಶ್ರಮಾನ್ವರ್ಣಾನಾತ್ಮನ್ಯೇವ ಸ್ಥಿತಃ
ಪುಮಾನ್ ।
ಸೋऽತಿವರ್ಣಾಶ್ರಮೀ ಪ್ರೋಕ್ತಃ
ಸರ್ವವೇದಾರ್ಥವೇದಿಭಿಃ ॥ ೨೩ ॥

ಟೀಕಾ : ಶರೀರಕ್ಕೆ ಹೇಳಿರುವ ಕುಲ, ಜಾತಿ, ವರ್ಣಾಶ್ರಮಗಳನ್ನೆಲ್ಲಾ ಅತಿಕ್ರಮಿಸಿ ತನ್ನ ಸ್ವರೂಪದಲ್ಲಿಯೇ ಯಾವನು ನೆಲೆಗೊಂಡಿರುವನೋ ಅವನೇ ಅತಿವರ್ಣಾಶ್ರಮಿಯು (ಸಂನ್ಯಾಸಿಯು) ಎಂಬುದನ್ನು ಸಮಸ್ತ ವೇದಾರ್ಥವನ್ನೂ ಬಲ್ಲ ಮಹಾತ್ಮರು ಹೇಳುತ್ತಾರೆ. ॥ ೨೩ ॥

**ಬಳಿಕ ಬ್ರಹ್ಮಾನಂದವನ್ನು ಕುರಿತು ಹೇಳುತ್ತಾರೆ.**

**ಮಂತ್ರ :** ನ ವಿಧಿರ್ನ ನಿಷೇಧಶ್ಚ ನ ವರ್ಜ್ಯಾವರ್ಜ್ಯಕಲ್ಪನಾ ।
ಬ್ರಹ್ಮವಿಜ್ಞಾನಿನಾಮಸ್ತಿ ತಥಾ ನಾನ್ಯಚ್ಚ ನಾರದ ॥ ೭೪ ॥

ಟೀಕಾ : ಎಲೈ ನಾರದನೇ, ಮೋಹವನ್ನು ನಿರ್ಮೂಲ ಮಾಡಿದ ಬ್ರಹ್ಮಜ್ಞಾನಿಗಳಿಗೆ ವಿಧಿಯಿಲ್ಲ, ನಿಷೇಧವಿಲ್ಲ, ಇದನ್ನು ಸ್ವೀಕರಿಬೇಕು. ಇದನ್ನು ಸ್ವೀಕರಿಸಬಾರದೆಂಬ ಕಲ್ಪನೆಯಿಲ್ಲ.

**ಬಳಿಕ ನಿರ್ಗುಣಾಷ್ಟಾಂಗಯೋಗವು ನಿರ್ಣಯಿಸಲ್ಪಡುತ್ತದೆ**
**ಶ್ರೀಶಿಖಿಬ್ರಾಹ್ಮಣೋಪನಿಷತ್ತಿನ ಸಾರವು**

**ಮಂತ್ರ :** ದೇಹೇಂದ್ರಿಯೇಷು ವೈರಾಗ್ಯಂ ಯಮ ಇತ್ಯುಚ್ಯತೇಬುಧೈಃ ।
ಅನುರಕ್ತಿಃ ಪರೇತತ್ತ್ವೇ ಸತತಂ ನಿಯಮಸ್ಮೃತಃ ।
ಸರ್ವವಸ್ತುನ್ಯುದಾಸೀನಭಾವಮಾಸನಮುತ್ತಮಮ್ ।
ಜಗತ್ಸರ್ವಮಿದಂ ಮಿಥ್ಯಾಪ್ರತೀತಿಃ ಪ್ರಾಣಸಂಯಮಃ ।
ಚಿತ್ತಸ್ಯಾಂತರ್ಮುಖೀ ಭಾವಃ ಪ್ರತ್ಯಾಹಾರಸ್ತು ಸತ್ತಮ ।
ಚಿತ್ತಸ್ಯನಿಶ್ಚಲೀಭಾವೋ, ಧಾರಣಾ ಧಾರಣಂ ವಿದುಃ
ಧ್ಯಾನಸ್ಯ ವಿಸ್ಮೃತಿ ಸಮ್ಯಕ್ಸಮಾಧಿರಭಿಧೀಯತೇ ॥ ೭೫ ॥

ಟೀಕಾ : ದೇಹೇಂದ್ರಿಯಾದಿಗಳಲ್ಲಿರುವ ಮಮಕಾರವನ್ನು ಬಿಡುವುದೇ ಯಮವು. ತನ್ನ ಅನುರಾಗವನ್ನು ಸರ್ವದಾ ಪರತತ್ತ್ವದಲ್ಲಿ ನೆಟ್ಟಿರುವುದೇ ನಿಯಮವೆನಿಸುವುದು. ಸಕಲ ವಸ್ತುಗಳ ಮೇಲೆ ಹುಟ್ಟುವ ಉದಾಸೀನವೇ ಪರಮಾಸನವೆನಿಸುವುದು. ದೃಶ್ಯವಾದ ಈ ಜಗವು ಮಿಥ್ಯವೆಂಬ ಕಥನವೇ ಪ್ರಾಣಾಯಾಮವು; ನಾಮರೂಪುಗಳಲ್ಲಿ

ವ್ಯಾಪಿಸಿಕೊಂಡು ಆ ನಾಮರೂಪಗಳ ಆಕಾರವಾಗಿರುವ ಬುದ್ಧಿಯನ್ನು ಬ್ರಹ್ಮಾಕಾರವನ್ನಾಗಿ ಮಾಡುವುದೇ ಪ್ರತ್ಯಾಹಾರವು. ಚಿನ್ಮಾತ್ರ ಸ್ವರೂಪನಾದ ಪರಬ್ರಹ್ಮವೇ ನಾನೆಂದು ಚಿಂತಿಸುವುದೇ ಧ್ಯಾನವು. ಈ ರೀತಿಯಾದ ನಿಶ್ಚಯಭಾವವನ್ನು ದೃಢವಾಗಿ ಧರಿಸುವುದೇ ಧಾರಣೆಯು. ಈ ಧಾರಣೆಯಲ್ಲಿ ಸೋಽಹಂ ಎಂಬ ತ್ರಿಪುಟಿಯೊಳಗಿರುವ ನಾಮರೂಪುಗಳು ಲಯವಾಗಿ ಉಳಿಯುವ ನಿಜಸ್ಥಿತಿಯೇ ಸಮಾಧಿಯೆನಿಸುವುದು.

**ಬಳಿಕ ಸಹಜಸಮಾಧಿಯ ಸಾರವು ಹೇಳಲ್ಪಡುತ್ತದೆ**

**ಮಂತ್ರ :** ಅಹಮೇವ ಪರಂ ಬ್ರಹ್ಮ ಬ್ರಹ್ಮಾಹಮಿತಿ ಸಂಸ್ಥಿತಿಃ ।
ಸಮಾಧಿಃ ಸಖು ವಿಜ್ಞೇಯಃ ಸರ್ವವೃತ್ತಿವಿವರ್ಜಿತಃ ॥೭೬॥

**ಟೀಕಾ :** ನಾನೇ ಪರಬ್ರಹ್ಮನು, ಪರಬ್ರಹ್ಮವೇ ನಾನೆಂದು ಎಡಬಿಡದೇ ಇರುವ ಬುದ್ಧಿವೃತ್ತಿಯ ಸ್ಥಿತಿಯೇ ಸಹಜಸಮಾಧಿಯೆನಿಸುವುದು.

**ಬಳಿಕ ವಾಸುದೇವೋಪನಿಷತ್ತಿನ ಸಾರವು ಹೇಳಲ್ಪಡುತ್ತದೆ**

**ಮಂತ್ರ :** ಏಕಾಗ್ರಮನಸಾ ಯೋ ಮಾಂ ಧ್ಯಾಯತೇ
ಹರಿಮವ್ಯಯಮ್ ।
ಹೃತ್ಪಂಕೇ ಚ ಸ್ವಾತ್ಮಾನಂ ಸ ಮುಕ್ತೋ
ನಾತ್ರ ಸಂಶಯಃ ॥೭೭॥

ಟೀಕಾ: ಏಕಾಕಾರವಾದ ಮನಸ್ಸಿನಿಂದ ಹರಿ ಎಂಬ ನಾಮಸ್ಮರಣ ಮಾತ್ರದಿಂದ ಕೂಡಿ ನಾಶರಹಿತನಾಗಿರುವ ನನ್ನನ್ನು ಯಾವ ಪುರುಷನು ತನ್ನ ಹೃದಯಕಮಲದಲ್ಲಿ ತನ್ನ ಸ್ವರೂಪವನ್ನಾಗಿ ಧ್ಯಾನಿಸುವನೋ, ಅವನೇ ಮುಕ್ತನು. ಈ ವಿಷಯದಲ್ಲಿ ಸಂಶಯವಿಲ್ಲ.

**ಮಂತ್ರ** : ಮದ್ರೂಪಮದ್ವಯಂ ಬ್ರಹ್ಮ ಆದಿಮಧ್ಯಾಂತವರ್ಜಿತಮ್।
ಸ್ವಪ್ರಭಂ ಸಚ್ಚಿದಾನಂದಂ ಭಕ್ತ್ಯಾ ಜಾನಾತಿ
ಚಾವ್ಯಯಮ್ ॥೭೮॥

ಟೀಕಾ : ಎಲೈ ನಾರದನೇ ಕೇಳು. ನನ್ನ ಸ್ವರೂಪವು ನನಗೆ ಅನ್ಯವಾದ ವಸ್ತುವಲ್ಲದ್ದು. ಆದಿ, ಮಧ್ಯ, ಅಂತ್ಯವಿಲ್ಲದ್ದು, ಸ್ವಯಂ ಪ್ರಕಾಶವಾದದ್ದು. ಇದನ್ನು ಭಕ್ತಿಯಿಂದ ತಿಳಿಯುವವನಾಗು.

**ಮಂತ್ರ** : ಏಕೋ ವಿಷ್ಣುರನೇಕೇಷು ಜಂಗಮ ಸ್ಥಾವರೇಷು ಚ ।
ಅನುಸ್ಯೂತೋವಸತ್ಯಾತ್ಮಾ ಭೂತೇಷ್ವಹಮವಸ್ಥಿತಃ॥೭೭॥

ಟೀಕಾ: ಒಬ್ಬನೇ ವಿಷ್ಣುವು ಅನಂತವಾದ ಜಂಗಮಸ್ಥಾವರಾತ್ಮಕವಾದ ಶರೀರಗಳಲ್ಲಿ, ಮಣಿಗಳಲ್ಲಿ ದಾರವು ಪೋಣಿಸಿನಂತೆ ಸೇರಿಕೊಂಡಿರುವನು. ಮತ್ತು ಈ ಭೂತಗಳಲ್ಲಿ ಆತ್ಮಸ್ವರೂಪದಿಂದಿರುವ ಆ ವಿಷ್ಣುರೂಪನಾದ ಆತ್ಮನೇ ನಾನಾಗಿದ್ದೇನೆ.

**ಮಂತ್ರ** : ತೈಲಂ ತಿಲೇಷು ಕಾಷ್ಠೇಷು ವಹ್ನಿಃ ಕ್ಷೀರೇ ಘೃತಂ ಯಥಾ।
ಗಂಧಃ ಪುಷ್ಪೇಷು ಭೂತೇಷು ತಥಾತ್ಮಾಽ ವಸ್ಥಿತೋ
ಹ್ಯಹಮ್ ॥೮೦॥

ಟೀಕಾ : ಎಳ್ಳಿನಲ್ಲಿ ಎಣ್ಣೆಯಂತೆಯೂ, ಕಟ್ಟಿಗೆಯಲ್ಲಿ ಬೆಂಕಿಯಂತೆಯೂ, ಹಾಲಿನಲ್ಲಿ ತುಪ್ಪದಂತೆಯೂ, ಹೂವಿನಲ್ಲಿ ಗಂಧದಂತೆಯೂ ಈ ಆತ್ಮನು ಅಹಂ ಎನಿಸಿಕೊಂಡು ಶರೀರಗಳಲ್ಲಿ ಇರುತ್ತಾನೆ.

**ಬಳಿಕ ಪೈಂಗಲೋಪನಿಷತ್ತಿನ ಸಾರವು ಹೇಳಲ್ಪಡುತ್ತದೆ.**

**ಮಂತ್ರ :** ಅಥ ಹೈನಂ ಪೈಂಗಲಃ ಪಪ್ರಚ್ಛ ಯಾಜ್ಞವಲ್ಕ್ಯಂ
ಜ್ಞಾನಿನಃ ।
ಕಿಂ ಕರ್ಮ ಕಾ ಚ ಸ್ಥಿತಿರಿತಿ ಸಹೋವಾಚ
ಯಾಜ್ಞವಲ್ಕ್ಯಃ ॥೮೧॥

ಟೀಕಾ : ಜ್ಞಾನಿಗೆ ಕರ್ಮ ಯಾವುದು, ಸ್ಥಿತಿ ಎಂಥಾದ್ದು ಎಂದು ಪೈಗಂಲನೆಂಬ ಅಧಿಕಾರಿಯು ಯಾಜ್ಞವಲ್ಕ್ಯರೆಂಬ ಗುರುವನ್ನು ಕೇಳಲು, ಯಾಜ್ಞವಲ್ಕ್ಯರು ಹೇಳುತ್ತಾರೆ.

**ಮಂತ್ರ:** ಅಮಾನಿತ್ವಾದಿ ಸಂಪನ್ನೋ ಮುಮುಕ್ಷುರೇಕವಿಂಶ ತಿ ಕುಲಂ
ತಾರಯತಿ ।
ಬ್ರಹ್ಮವಿನ್ಮಾತ್ರೇಣ ಕುಲಮೇಕೋತ್ತರಶತಂ
ತಾರಯತಿ ॥೮೨॥

ಟೀಕಾ : ದೇಹಾಭಿಮಾನಶೂನ್ಯನಾಗಿ ಸಹಜಾನಂದಾಭಿಲಾಷೆಯುಳ್ಳ ಮುಮುಕ್ಷುವು ಇಪ್ಪತ್ತೊಂದು ಕುಲಗಳನ್ನು ಉದ್ಧರಿಸುವನು. ಅಪರೋಕ್ಷಜ್ಞಾನಿಯು(ಅಂದರೆ ಜೀವನ್ಮುಕ್ತನು)ನೂರ ಇಪ್ಪತ್ತೊಂದು ಕುಲಗಳನ್ನು ಉದ್ಧರಿಸುತ್ತಾನೆ. ಈ ಜೀವನ್ಮುಕ್ತನು ಪ್ರಾರಬ್ಧಕರ್ಮ

ಇರುವವರೆಗೂ ಹಾವಿನ ಪೊರೆಯಂತೆ ರೂಪು ಮಾತ್ರ ವಿಶಿಷ್ಟನಾಗಿ ಸಂಚರಿಸುತ್ತಾನೆ.

**ಮಂತ್ರ** : ತೀರ್ಥೇ ಶ್ವಪಚಗೃಹೇ ವಾ
ತನುಂ ವಿಹಾಯ ಯಾತಿ ಕೈವಲ್ಯಮ್ । ॥೮೩॥

ಟೀಕಾ : ಅಂತಹ ಜ್ಞಾನಿಯು ತೀರ್ಥದಲ್ಲಿಯಾಗಲಿ, ಕ್ಷೇತ್ರದಲ್ಲಿಯಾಗಲಿ, ಚಾಂಡಾಲನ ಗೃಹದಲ್ಲಿಯಾಗಲಿ, ಶರೀರವನ್ನು ಬಿಟ್ಟವನಾದಾಗ್ಯೂ ಕೈವಲ್ಯವನ್ನು ಪಡೆಯುತ್ತಾನೆ.

**ಮಂತ್ರ** : ನಾಶೌಚಂ ನಾಗ್ನಿಕಾರ್ಯಂ ಚ ನ ಪಿಂಡಂ ನೋದಕಕ್ರಿಯಾ।
ನ ಕುರ್ಯಾತ್ಪಾರ್ವಣಾದೀನಿ ಬ್ರಹ್ಮಭೂತಾಯ
ಭಿಕ್ಷವೇ ॥ ॥೮೪॥

ಟೀಕಾ : ಅಂತಹ ಜ್ಞಾನಿಗೆ ಶರೀರನಾಶಸ್ಥಿತಿಯಲ್ಲಿ ಅಶೌಚವಿಲ್ಲ, ದೇಹಕ್ಕೆ ಅಗ್ನಿಸಂಸ್ಕಾರವಿಲ್ಲ, ಪಿಂಡಪ್ರದಾನವಿಲ್ಲ, ತಿಲೋದಕ ಕ್ರಿಯೆಯಿಲ್ಲ ಮತ್ತು ಬ್ರಹ್ಮಾಕಾರನಾದ ಆ ಯೋಗಿಗೆ ತಿಥಿಯೂ ಸಹ ಮಾಡಕೂಡದು.

**ಮಂತ್ರ** : ದಗ್ಧಸ್ಯ ದಹನಂ ನಾಸ್ತಿ ಪಕ್ವಸ್ಯ ಪಚನಂ ಯಥಾ ।
ಜ್ಞಾನಾಗ್ನಿದಗ್ಧದೇಹಸ್ಯ ನ ಚ ಶ್ರಾದ್ಧಂ ನ
ಚ ಕ್ರಿಯಾ ॥ ॥೮೫॥

ಟೀಕಾ : ಬೆಂದ ಪದಾರ್ಥವನ್ನು ಮತ್ತೆ ಬೇಯಿಸಬೇಕಾಗಿಲ್ಲದಂತೆ

ಸುಟ್ಟುಹೋಗಿರುವ ದೇಹಕ್ಕೆ ದಹನವಿಲ್ಲ. ಈ ರೀತಿ ಜ್ಞಾನಾಗ್ನಿಯಿಂದ ಸುಡಲ್ಪಟ್ಟ ದೇಹವುಳ್ಳ ಜೀವನ್ಮುಕ್ತನಿಗೆ ಶ್ರಾದ್ಧಾದಿ ಕರ್ಮಗಳಿಲ್ಲವು.

**ಬಳಿಕ ಶಿಷ್ಯನ ನಡತೆಯು ಹೇಳಲ್ಪಡುತ್ತದೆ**

**ಮಂತ್ರ :** ಯಾವಚ್ಚೋಪಾಧಿಪರ್ಯಂತಂ
ತಾವಚ್ಛುಶ್ರೂಷಯೇದ್ಗುರುಮ್ ।
ಗುರುವದ್ಗುರುಭಾರ್ಯಾಯಾಂ ತತ್ಪುತ್ರೇಷು ಚ
ವರ್ತನಮ್ ॥ ॥೨೬॥

ಟೀಕಾ : ಎಲ್ಲಿಯುವರಗೆ ಉಪಾಧಿಯೆನಿಸಿದ ಗುರುವಿನ ಶರೀರವಿರುವುದೋ, ಅಲ್ಲಿಯುವರೆಗೂ ಗುರುಸೇವೆಯನ್ನು ಮಾಡಬೇಕು. ಗುರುವಿನಂತೆ ಗುರುಪತ್ನಿಯರಲ್ಲಿಯೂ, ಗುರುವಿನ ಪುತ್ರರಲ್ಲಿಯೂ ನಿಶ್ಚಲವರ್ತನವಿರಬೇಕು.

**ಬಳಿಕ ಜ್ಞಾನಿಯ ಶರೀರದ ಮರಣವು ಹೇಳಲ್ಪಡುತ್ತದೆ.**

**ಮಂತ್ರ :** ಯತ್ರ ಯತ್ರ ಮೃತೋ ಜ್ಞಾನೀ ಯೇನ ವಾ ಕೇನ
ಮೃತ್ಯುನಾ ।
ಯಥಾ ಸರ್ವಗತಂ ವ್ಯೋಮ ತತ್ರ ತತ್ರ
ಲಯಂ ಗತಃ ॥ ॥೭೭॥

**ಟೀಕಾ : ಘಟಗಳಲ್ಲಿ ವ್ಯಾಪಿಸಿಕೊಂಡಿರುವ ಆಕಾಶವು ಆಯಾಯ ಘಟಗಳು ನಾಶವಾದಾಗಲೂ ಸ್ಥಳದಲ್ಲಿಯೇ ಆ ಮಹಾಕಾಶದಲ್ಲಿ**

ಲಯವನ್ನು ಹೊಂದುವಂತೆ ಯಾವ ವಿಧವಾದ ಮೃತ್ಯುವಿನಿಂದಾಗಲೀ ಜ್ಞಾನಿಯ ಶರೀರವು ನಾಶವಾದಾಗಲೂ ಆ ಸ್ಥಳದಲ್ಲಿಯೇ ಪರಿಪೂರ್ಣ ಬ್ರಹ್ಮಾಕಾರನಾಗುವನು.

**ಮಂತ್ರ :** ತಪೇದ್ವರ್ಷಸಹಸ್ರಾಣಿ ಏಕಪಾದಸ್ಥಿತೋ ನರಃ ।
ಏತಸ್ಯ ಧ್ಯಾನಯೋಗಸ್ಯ ಕಾಲಾಂ ನಾರ್ಹತಿ
ಷೋಡಶೀಮ್ ॥ ॥೮೮॥

ಟೀಕಾ : ಮನುಷ್ಯನು ಒಂದೇ ಕಾಲಿನಲ್ಲಿ ನಿಂತು ಸಾವಿರ ವರ್ಷ ಬಿಸಿಲಿನ ತಾಪದಲ್ಲಿ ತಪಸ್ಸು ಮಾಡಿದರೂ ಧ್ಯಾನ ಯೋಗದ ಹದಿನಾರನೆಯ ಒಂದು ಕಳೆಯನ್ನು ಹೊಂದಲಾರನು. ಎಂದರೆ ಜ್ಞಾನವಿಲ್ಲದ, ಧ್ಯಾನವಿಲ್ಲದ ಕೇವಲ ತಪಸ್ಸು ನಿಷ್ಪ್ರಯೋಜನ ವೆಂಬ ಭಾವವು.

**ಮಂತ್ರ :** ಇದಂ ಜ್ಞಾನಮಿದಂ ಜ್ಞೇಯಂ ತತ್ಸರ್ವಂ ಜ್ಞಾತುಮಿಚ್ಛತಿ ।
ಅಪಿ ವರ್ಷ ಸಹಸ್ರಾಯುಃ ಶಾಸ್ತ್ರಾಂತಂ
ನಾಧಿಗಚ್ಛತಿ ॥ ॥೮೯॥

ಟೀಕಾ : ಇದು ತಿಳಿಯುವ ಜ್ಞಾನವು. ಇದು ತಿಳಿಸಿಕೊಳ್ಳುವ ಜ್ಞೇಯವು. ಎಂಬ ವಿಷಯವನ್ನು ಸಂಪೂರ್ಣವಾಗಿ ತಿಳಿಯಬೇಕೆಂಬ ಮನುಷ್ಯನು ಸಾವಿರ ವರ್ಷ ಬದುಕಿದ್ದು ಶೋಧಿಸಿದಾಗ್ಯೂ ಶಾಸ್ತ್ರಪಾಠ ದಲ್ಲಿ ಕೊನೆಯನ್ನು ಕಾಣಲಾರನು. ಆದ್ದರಿಂದ ಮುಖ್ಯ ಕರ್ತವ್ಯವನ್ನು ಹೇಳುತ್ತಾರೆ.

ಮಂತ್ರ : ವಿಜ್ಞೇಯೋಽಕ್ಷರತನ್ಮಾತ್ರೋ ಜೀವಿತಂ ವಾಪಿ ಚಂಚಲಮ್।
ವಿಹಾಯ ಶಾಸ್ತ್ರಜಾಲಾನಿ ಯತ್ಸತ್ಯಂ ತದುಪಾಸ್ಯತಾಮ್।
ಅನಂತಕರ್ಮಶೌಚಂ ಚ ಜಪೋ ಯಜ್ಞಸ್ತಥೈವ ಚ ।
ತೀರ್ಥಯಾತ್ರಾಭಿಗಮನಂ ಯಾವತ್ತತ್ತ್ವಂ ನ
ವಿಂದತಿ ॥೬೦॥

ಟೀಕಾ : ಚಂಚಲವಾಗಿ ನಾಶವೆನಿಸುವ ಶರೀರಜೀವಿತ ಒಂದು. ಅಕ್ಷರವೆಂಬ ತನ್ಮಾತ್ರೀ ಮತ್ತೊಂದು ಇವೆರಡನ್ನೂ ತಿಳಿಯಬೇಕಾಗಿದೆ. ಇದಕ್ಕಾಗಿ ಶಾಸ್ತ್ರಗಳೆಲ್ಲವನ್ನು ಬಿಟ್ಟು ಯಾವುದು ಸತ್ಯವೋ, ಅದನ್ನು ಪಡೆಯಬೇಕು. ವಾಗಿಯದ ಕರ್ಮಗಳು ಶರೀರ ಶುದ್ಧಿಗಳೂ, ಜಪಗಳೂ, ಯಜ್ಞಗಳೂ ಇದರಂತೆಯೇ ತೀರ್ಥಯಾತ್ರೆಗಳು ಇವೆಲ್ಲಾ ಎಲ್ಲಿಯವರೆಗೆ ತಮ್ಮ ಸ್ವರೂಪ ಸಾಕ್ಷಾತ್ಕಾರವಾಗುವುದಿಲ್ಲವೋ, ಅಲ್ಲಿಯ ವರೆಗೆ ಮಾತ್ರ, ಅಂದರೆ ಸ್ವರೂಪ ಸಾಕ್ಷಾತ್ಕಾರದ ನಂತರ, ಈ ಒಂದೂ ಬೇಕಿಲ್ಲವೆಂದರ್ಥ.

## ಬಳಿಕ ಮಹೋಪನಿಷತ್ತಿನ ಎರಡನೆಯ ಅಧ್ಯಾಯವು ಹೇಳಲ್ಪಡುತ್ತದೆ

ಮಂತ್ರ : ಜರಾಮರಣಮಾಪಚ್ಚ ರಾಜ್ಯಂ ದಾರಿದ್ರ್ಯಮೇವ ಚ ।
ರಮ್ಯಮಿತ್ಯೇವ ಯೋ ಭುಂಕ್ತೇ ಸ ಜೀವನ್ಮುಕ್ತ
ಉಚ್ಯತೇ ॥ ॥೬೧॥

ಟೀಕಾ : ಮುಪ್ಪು, ಮರಣ, ವಿಪತ್ತು, ದಾರಿದ್ರ್ಯಗಳನ್ನೂ ಮಹಾರಾಜ ಪದವಿಯನ್ನೂ ಸಹ ಯಾವನು ಸಮವಾಗಿ ಅನುಭವಿಸುವನೋ ಅವನೇ ಜೀವನ್ಮುಕ್ತನು.

ಅನಂತಶಾಸ್ತ್ರಂ ಬಹುವೇದಿತವ್ಯಂ ಅಲ್ಪಶ್ಚ ಕಾಲಃ ।
ಬಹವಶ್ಚ ವಿಘ್ನಾ ಯತ್ಸಾರಭೂತಂ ತದುಪಾಸಿತವ್ಯಮ್ ॥

ಟೀಕಾ : ಶಾಸ್ತ್ರವು ಸೀಮಾರಹಿತವಾಗಿದೆ. ತಿಳಿಯಬೇಕಾದದ್ದು ಬಹಳವಿದೆ. ನಿನಗೆ ಕಾಲವು ಕಡಿಮೆ ಇದೆ. ಅನಂತ ವಿಘ್ನಗಳಿವೆ ಆದ್ದರಿಂದ ಬುದ್ಧಿವಂತನಾದ ನೀನು ಯಾವುದು ಸಾರಭೂತವಾದದ್ದಿದೆಯೋ, ಅದನ್ನು ಪಡೆದುಕೊಳ್ಳಬೇಕು. ॥೯೨॥

ಮಂತ್ರ : ಧರ್ಮಾಧರ್ಮೌ ಸುಖಂ ದುಃಖಂ ತಥಾ ಮರಣಜನ್ಮನೀ।
ಧಿಯಾ ಯೇನ ಸುಸಂತ್ಯಕ್ತಂ ಸ ಜೀವನ್ಮುಕ್ತ
ಉಚ್ಯತೇ ॥೯೨॥

ಟೀಕಾ : ಧರ್ಮಾಧರ್ಮಗಳನ್ನೂ, ಸುಖದುಃಖಗಳನ್ನೂ, ಅದರಂತೆಯೇ ಜನ್ಮಮರಣಗಳನ್ನೂ, ಯಾವನು ಬುದ್ಧಿಯಿಂದ ತ್ಯಜಿಸುವನೋ, ಅವನು ಜೀವನ್ಮುಕ್ತನು.

ಮಂತ್ರ : ಜನ್ಮಸ್ಥಿತಿವಿನಾಶೇಷು ಸೋದಯಾಸ್ತಮಯೇಷು ಚ ।
ಸಮಮೇವ ಮನೋ ಯಸ್ಯ ಸ ಜೀವನ್ಮುಕ್ತ
ಉಚ್ಯತೇ ॥೯೩॥

ಟೀಕಾ : ಉತ್ಪತ್ತಿ, ಸ್ಥಿತಿ, ನಾಶಗಳಲ್ಲಿಯೂ, ಉದಯಾಸ್ತಮಯಗಳಲ್ಲಿಯೂ, ಹರ್ಷದ್ವೇಷಗಳಲ್ಲಿಯೂ, ಆಯಾಯ ಕಾಲದಲ್ಲಿ ಪ್ರಾರಬ್ಧದಿಂದ ನಿಶ್ಚಿತವಾದ ಪದಾರ್ಥಗಳನ್ನು ಯಾವನು ಅನುಭೋಗಿಸುವನೋ, ಅವನು ಜೀವನ್ಮುಕ್ತನೆನಿಸುವನು. ॥೯೩॥

ಬಳಿಕ ಮಹೋಪನಿಷತ್ತಿನ ಮೂರನೆಯ ಅಧ್ಯಾಯದ ಸಾರವು ಹೇಳಲ್ಪಡುತ್ತದೆ

ಮಂತ್ರ : ನಿದಾಘೋ ನಾಮ ಮುನಿರಾಟ್ ಪ್ರಾಪ್ತವಿದ್ಯಶ್ಚ ಬಾಲಕಃ।
ವಿಹೃತಸ್ತೀರ್ಥಯಾತ್ರಾರ್ಥಂ ಪಿತ್ರಾನುಜ್ಞಾತವಾನ್ ಸ್ವಯಮ್ ।
ಸಾರ್ಧತ್ರಿಕೋಟಿತೀರ್ಥೇಷು ಸ್ನಾತ್ವಾ ಗೃಹಮುಪಾಗತಃ
ಸ್ವೋದಂತಂ ಕಥಯಾಮಾಸ ಋಭುಂ ನತ್ವಾ ಮಹಾಯಶಃ ॥
ಸಾರ್ಧತ್ರಿಕೋಟಿತೀರ್ಥೇಷು ಸ್ನಾನಪುಣ್ಯ ಪ್ರಭಾವತಃ ।
ಪ್ರಾದುರ್ಭೂತೋ ಮನಸಿ ಮೇ ವಿಚಾರಃ ಸೋಽಯಮೀದೃಶಃ ॥ ॥೯೪॥

ಟೀಕಾ : ನಿದಾಘನೆಂಬ ಮುನಿಶ್ರೇಷ್ಠನು, ಬಾಲ್ಯದಲ್ಲಿಯೇ ಸಕಲ ವಿದ್ಯೆಗಳನ್ನು ಕಲಿತು ತಂದೆಯ ಆಜ್ಞೆಯಂತೆ ತೀರ್ಥಯಾತ್ರೆಗೆ ಹೊರಟು ಒಂದೂವರೆ ಕೋಟಿ ತೀರ್ಥಗಳಲ್ಲಿ ಸ್ನಾನಮಾಡಿ ತಂದೆಯ ಬಳಿಗೆ ಬಂದು ಇಂತೆಂದನು. ಎಲೈ ತಂದೆಯೇ, ಒಂದೂವರೆ ಕೋಟಿ ತೀರ್ಥಗಳಲ್ಲಿ

ಸ್ನಾನಮಾಡಿ ಪರಿಶುದ್ಧನಾಗಿ ಬಂದಿರುವೆನು. ಇದರ ಪುಣ್ಯ ಪ್ರಭಾವ ದಿಂದ ನನ್ನ ಮನಸ್ಸಿನಲ್ಲಿ ಇಂತಹ ವಿಚಾರ ಹುಟ್ಟಿತು.

ಮಂತ್ರ : ಜಾಯತೇ ಮ್ರಿಯತೇ ಲೋಕೋ ಮ್ರಿಯತೇ
ಜನನಾಯ ಚ।

ಅಸ್ಥಿರಾಃ ಸರ್ವ ಏವೇಮೇ ಸಚರಾಚರಚೇಷ್ಟಿತಾಃ ।
ಭಾರೋಽ ವಿವೇಕಿನಃ ಶಾಸ್ತ್ರಂ ಭಾರೋ ಜ್ಞಾನಂ ಚ ರಾಗಿಣಃ।
ಅಶಾಂತಸ್ಯ ಮನೋ ಭಾರೋ
ಭಾರೋ ಸ್ವಾತ್ಮವಿದೋ ವಪುಃ ॥೯೫॥

ಟೀಕಾ : ಲೋಕದಲ್ಲಿ ಪ್ರಾಣಿಗಳು ಸಾಯುವುದಕ್ಕಾಗಿ ಹುಟ್ಟು ವುವು. ಹುಟ್ಟುವುದಕ್ಕಾಗಿ ಸಾಯುತ್ತವೆ. ಈ ಚರಾಚರಾತ್ಮಕ ಪ್ರಪಂಚವೆಲ್ಲವೂ ಅಸ್ಥಿರವು. ಆದರೆ ಅವಿವೇಕಿಗಳಿಗೆಲ್ಲಾ ಶಾಸ್ತ್ರಜಾಲವು ಭಾರವಾಗಿರುವುವು. ವಿಷಯಾಸಕ್ತರಾದ ಪಾಮರಿಗೆ ಆತ್ಮಜ್ಞಾನವು ಅತಿ ಭಾರವಾಗಿರುತ್ತದೆ. ಶಾಂತಿಯಿಲ್ಲದ ಪುರುಷನಿಗೆ ತನ್ನ ಮನಸ್ಸೇ ಭಾರವಾಗಿರುತ್ತದೆ. ಜ್ಞಾನಿಗಳಿಗೆ ತಮ್ಮ ಶರೀರವೇ ಭಾರವಾಗಿರುತ್ತದೆ.

ಇನ್ನು ಮಹೋಪನಿಷತ್ತಿನ ನಾಲ್ಕನೆಯ ಅಧ್ಯಾಯದ ಸಾರವು ಹೇಳಲ್ಪಡುತ್ತದೆ

ಮಂತ್ರ : ತತ್ತ್ವಾವಬೋಧ ಏವಾಸೌ ವಾಸನಾತೃಣಪಾವಕಃ ।
ಪ್ರೋಕ್ತಃ ಸಮಾಧಿಶಬ್ದೇನ ನತು
ತೂಷ್ಣೀಮವಸ್ಥಿತಃ ॥೯೬॥

ಟೀಕಾ : ಭೃಗುಮುನಿಯು ಹೇಳುತ್ತಾನೆ. ಎಲೈ ನಿದಾಘನೇ, ಕೇಳು ಈ ತತ್ತ್ವಜ್ಞಾನವೇ ಸಮಾಧಿಯೆಂಬ ಶಬ್ದದಿಂದ, ವ್ಯವಹರಿಸಲ್ಪಡುತ್ತದೆ. ಸುಮ್ಮನೆ ಮೌನದಿಂದಿರುವುದು ಸಮಾಧಿಯಲ್ಲ.

ಮಂತ್ರ : ಗುರುಶಾಸ್ತ್ರೋಕ್ತಮಾರ್ಗೇಣ ಸ್ವಾನುಭೂತ್ಯಾ ಚ ಚಿದ್ಘನೇ।
ಬ್ರಹ್ಮೈವಾಹಮಿತಿ ಜ್ಞಾತ್ವಾ ವೀತಶೋಕೋ
ಭವೇನ್ಮುನಿಃ ॥೯೭॥

ಟೀಕಾಃ ಗುರು ಹೇಳಿದ್ದು, ಶಾಸ್ತ್ರದಿಂದ ಹೇಳಲ್ಪಟ್ಟದ್ದು, ಸ್ವಾನುಭವದಲ್ಲಿ ತೋರಿದ್ದು, ಇವು ಮೂರು ಒಂದೇ ಆಗಿ ಚಿದ್ವಸ್ತುವಿನಲ್ಲಿ ನಿಂತು ಆ ಬ್ರಹ್ಮವೇ ನಾನೆಂಬ ಜ್ಞಾನದಿಂದ ದುಃಖವನ್ನು ಕಳೆದುಕೊಳ್ಳಬೇಕು.

ಮಂತ್ರ : ನ ಧನಾನ್ಯುಪಕುರ್ವಂತಿ ನ ಮಿತ್ರಾಣಿ ನ ಬಾಂಧವಾಃ ।
ನ ಕಾಯಕ್ಲೇಶವೈಧುರ್ಯಂ ನ
ತೀರ್ಥಾಯತನಾಶ್ರಯಃ ॥ ॥೯೮॥

ಟೀಕಾ : ಧನವೂ, ಮಿತ್ರರೂ, ಬಂಧುಗಳೂ, ಕಾಯಕ್ಲೇಶವೂ, ತೀರ್ಥಯಾತ್ರೆಗಳೂ ಇವು ಯಾವುದೂ ಉಪಯೋಗಪಡುವುದಿಲ್ಲ. ಕೇವಲ ಮನಸ್ಸನ್ನು ತನ್ನ ಸ್ವಾಧೀನದಲ್ಲಿಟ್ಟುಕೊಳ್ಳುವುದರಿಂದ ಪರಮಪದವು ಸಾಧ್ಯವಾಗುವುದು.

ಮಂತ್ರ : ನಾಭಿನಂದತ್ಯಸಂಪ್ರಾಪ್ತಂ ಪ್ರಾಪ್ತಂ ಭುಂಕ್ತೇ
ಯಥೇಪ್ಸಿತಮ್ ।

ಯಃ ಸ ಸೌಮ್ಯ ಸಮಾಚಾರಃ ಸಂತುಷ್ಟ
ಇತಿ ಕಥ್ಯತೇ ॥ ೯೯॥

ಟೀಕಾ : ಪ್ರಾಪ್ತವಾದ ವಿಷಯಗಳನ್ನು ಬಯಸದೇ ಒದಗಿದ ವಿಷಯಗಳನ್ನು ತ್ಯಜಿಸದೇ ಅನುಭವಿಸುತ್ತಾ ಯಾವನು ಸೌಮ್ಯ ಸಮಾಚಾರದಿಂದ ಕೂಡಿರುವನೋ, ಆವನು ತುಷ್ಟನೆನಿಸುತ್ತಾನೆ, ಇದರಲ್ಲಿ ಸಂಶಯವಿಲ್ಲ.

ಅಖಂಡಜ್ಞಾನವಿಲ್ಲದವರೆಲ್ಲರೂ ಭ್ರಾಂತರೆಂದು ಹೇಳಲ್ಪಡುತ್ತದೆ.

ಮಂತ್ರ : ತ್ರಿಣಾಚಿಕಾದಿ ಯೋಗಾಂತಾ ಈಶ್ವರ ಭ್ರಾಂತಿಮಾಶ್ರಿತಾಃ ಃ
ಲೋಕಾಯತಾದಿ ಸಾಂಖ್ಯಾಂತಾ
ಜೀವವಿಭ್ರಾಂತಿಮಾಶ್ರಿತಾಃ ॥೧೦೦॥

ಟೀಕಾ : ತ್ರಿಣಾಚಿಕರು ಮೊದಲುಗೊಂಡು ಯೋಗಸಾಧನೆಯುವರೇ ಕೊನೆಯಾಗಿ ಉಳ್ಳವರೆಲ್ಲರೂ ಈಶ್ವರ ವಿಷಯದಲ್ಲಿಭ್ರಾಂತರು. ಅವರಿಗೆ ಈಶ್ವರನು ಇಂಥಾವನು ಎಂಬ ವಿಷಯ ಗೊತ್ತಿಲ್ಲ. ಲೋಕಾಯತರು ಅಂದರೆ, ಪಾಮರರು ಮೊದಲುಗೊಂಡು ಸಾಂಖ್ಯವಾದಿಯೇ ಕೊನೆಯಾಗಿ ಉಳ್ಳ ಇವರೆಲ್ಲರೂ ಜೀವನ ವಿಷಯದಲ್ಲಿ ಭ್ರಾಂತರು. ಇವರಿಗೆ ಜೀವನು ಇಂಥಾವನು ಎಂಬ ವಿಷಯವೂ ಸಹಾ ಗೊತ್ತಿಲ್ಲ.

ಮಂತ್ರ : ತಸ್ಮಾನ್ಮುಮುಕ್ಷುಭಿರ್ನೈವ ಮತಿರ್ಜೀವೇಶವಾದಯೋಃ ।
ಕಾರ್ಯಾ ಕಿಂತು ಬ್ರಹ್ಮತತ್ತ್ವಂ ನಿಶ್ಚಲೇನ
ವಿಚಾರ್ಯತಾಮ್ ॥೧೦೧॥

ಟೀಕಾ : ಆದ್ದರಿಂದ ಮುಮುಕ್ಷುವು ಜೀವೇಶ್ವರರ ವಿಷಯದಲ್ಲಿ ವಾದ ಮಾಡಕೂಡದು. ನಿಶ್ಚಲವಾದ ಮನಸ್ಸಿನಿಂದ ಬ್ರಹ್ಮತತ್ತ್ವವನ್ನೇ ಶೋಧಿಸಬೇಕು.

ಮಂತ್ರ: ದುರ್ಲಭೋ ವಿಷಯತ್ಯಾಗೋ ದುರ್ಲಭಂ ತತ್ತ್ವದರ್ಶನಮ್
ದುರ್ಲಭಾ ಸಹಜಾವಸ್ಥಾ ಸದ್ಗುರೋಃ ಕರುಣಾಂ
ವಿನಾ ॥ ॥೧೦೨॥

ಟೀಕಾ : ಪ್ರಾಣಿಗಳಲ್ಲಿ ವಿಷಯತ್ಯಾಗವು ದುರ್ಲಭವು. ಅದಕ್ಕಿಂತಲೂ ತತ್ತ್ವದರ್ಶನವು ದುರ್ಲಭವು. ಅದಕ್ಕಿಂತಲೂ ಸಹಜಾವಸ್ಥೆಯು ದುರ್ಲಭವು. ಇವು ಸದ್ಗುರು ಕರುಣಾನುಗ್ರಹವಿಲ್ಲದೆ ದೊರೆಯಲಾರವು. ಮತ್ತು ಜೀವೇಶ್ವರರ ವಿಷಯದಲ್ಲಿ ಭೇದವನ್ನೆಣಿಸುವವರಿಗೆ ಭಯವುಂಟೆಂದು ಹೇಳಲ್ಪಡುತ್ತದೆ.

ಮಂತ್ರ : ಯದಾಹ್ಯೇವೈಷ ಏತಸ್ಮಿನ್ನಲ್ಪಮಪ್ಯಂತರಂ ನರಃ ।
ವಿಜಾನಾತಿ ತದಾ ತಸ್ಯ ಭಯಂ ಸ್ಯಾನ್ನಾತ್ರ
ಸಂಶಯಃ ॥೧೦೩॥

ಟೀಕಾ : ಈ ಜೀವೇಶ್ವರರ ಸ್ವರೂಪ ವಿಷಯದಲ್ಲಿ ಯಾವನು ಭೇದವನ್ನೆಣಿಸುವನೋ, ಅಂತಹ ಪಾಮರನಿಗೆ ಎಂದಿಗೂ ಭಯ ತಪ್ಪಲಾರದು. ಈ ವಿಷಯದಲ್ಲಿ ಸಂಶಯವಿಲ್ಲ.

ಮಂತ್ರ : ನಾಹಂ ಬ್ರಹ್ಮೇತಿ ಸಂಕಲ್ಪಾತ್ಸುದೃಢಾದ್ಬಧ್ಯತೇ ಮನಃ ।
ಸರ್ವಂ ಬ್ರಹ್ಮೇತಿ ಸಂಕಲ್ಪಾತ್ಸುದೃಢಾನ್ಮುಚ್ಯತೇ ಮನಃ ॥

ಕೃಶೋऽಹಂ ದುಃಖಬದ್ಧೋऽಹಂ
ಹಸ್ತಪಾದಾದಿವಾನಹಮ್ ।
ಇತಿ ಭಾವಾನುರೂಪೇಣ ವ್ಯವಹಾರೇಣ ಬಧ್ಯತೇ ॥೧೨೪॥

ಟೀಕಾ : ನಾನು ಬ್ರಹ್ಮನು ಅಲ್ಲವೆಂಬ ದೃಢವಾದ ಸಂಕಲ್ಪದಿಂದ ಮನವು ಬದ್ಧಿತವಾಗಿರುತ್ತದೆ. ನಾನು ಕೃಶನು, ದುಃಖದಿಂದ ಬದ್ಧಿತನಾಗಿರುವೆನು. ನಾನು ಕೈಕಾಲುಗಳುಳ್ಳವನು. ಈ ಭಾವದಿಂದ ಕೂಡಿರುವ ವ್ಯವಹಾರದಲ್ಲಿ ಜೀವನು ಬದ್ಧಿತನಾಗಿರುವನು. ಇದರ ನಿವೃತ್ತಿಯು ಕ್ರಮವು ಹೇಗೆಂದರೆ,

**ಮಂತ್ರ :** ನಾಹಂ ದುಃಖೀ ನ ಮೇ ದೇಹೋ ಬಂಧಃ
ಕೋऽಸ್ಯಾತ್ಮನಿ ಸ್ಥಿತಃ ।
ಇತಿ ಭಾವಾನುರೂಪೇಣ ವ್ಯವಹಾರೇಣ ಮುಚ್ಯತೇ ॥೧೨೫॥

ಟೀಕಾ : ನನಗೆ ದೇಹವಿಲ್ಲ, ಆದ್ದರಿಂದ ನಾನು ದುಃಖಿಯಲ್ಲ. ಆತ್ಮಜ್ಞಾನಿಗೆ ಬಂಧನವೆಲ್ಲಿಯದು ? ಈ ರೀತಿಯಾಗಿ ಯಾವನು ಅನುಸಂಧಾನ ಮಾಡುವನೋ ಅವನು ಬಂಧನದಿಂದ ಬಿಡುಗಡೆ ಹೊಂದುತ್ತಾನೆ.

**ಮಂತ್ರ :** ನಾಹಂ ಮಾಂಸಂ ನ ಚಾಸ್ಥೀನಿ ದೇಹಾದನ್ಯಃ
ಪರೋऽಸ್ಮ್ಯಹಮ್ ।
ಇತಿ ನಿಶ್ಚಿತವಾನಂತಃ ಕ್ಷೀಣಾವಿದ್ಯೋ ವಿಮುಚ್ಯತೇ ॥೧೨೬॥

ಟೀಕಾ : ನಾನು ಮಾಂಸವಲ್ಲ, ನಾನು ಮೂಳೆಯಲ್ಲ, ನಾನು ದೇಹಾತೀತನು. ಪರಮಾತ್ಮ ಸ್ವರೂಪನು. ಈ ರೀತಿ ಅಂತರಂಗದಲ್ಲಿ ನಿಶ್ಚಯಿಸಿಕೊಂಡು ಯಾವನು ಅವಿದ್ಯೆಯನ್ನು ನಾಶಪಡಿಸುವನೋ, ಅವನೇ ಮುಕ್ತನು.

## ಬಳಿಕ ಮಹೋಪನಿಷತ್ತಿನ ಐದನೆಯ ಅಧ್ಯಾಯವು ಹೇಳಲ್ಪಡುತ್ತದೆ

ಮಂತ್ರ : ಪ್ರಾಪ್ಯ ಜ್ಞಾನವಶಾಮೇತಾಂ ಪಶುಮ್ಲೇಚ್ಛಾದಯೋಽಪಿ ಯೇ ।
ಸದೇಹಾ ವಾಪ್ಯದೇಹಾ ವಾ ತೇ ಮುಕ್ತಾ ನಾತ್ರ
ಸಂಶಯಃ ॥ ॥೧೧೭॥

ಟೀಕಾ : ಯಾವ ಜಾತಿಯವನಾದಾಗ್ಯೂ ಈ ಮೇಲೆ ಹೇಳಿದ ಜ್ಞಾನವಿದ್ದಲ್ಲಿ ಅವನು ಮುಕ್ತನು ಎಂಬ ವಿಷಯವನ್ನು ಹೇಳುತ್ತಾರೆ. ಈ ಜ್ಞಾನಸ್ಥಿತಿಯನ್ನು ಪಡೆದವನು ತುರುಕನಾಗಲೀ, ಪಶುವಿನಂತಿರಲಿ, ದೇಹದಿಂದ ಕೂಡಿರಲಿ, ಅವನು ಮುಕ್ತನು ಇದರಲ್ಲಿ ಸಂಶಯವಿಲ್ಲ.

ಮಂತ್ರ: ಸರ್ವಂ ಬ್ರಹ್ಮೇತಿ ಯಸ್ಯಾಂತರ್ಭಾವನಾ ಸಾ ಹಿ ಮುಕ್ತಿದಾ।
ಭೇದದೃಷ್ಟಿರವಿದ್ಯೇಯಂ ಸರ್ವಥಾ ತಾಂ
ವಿಸರ್ಜಯೇತ್॥ ॥೧೧೮॥

ಟೀಕಾ : ಯಾವನ ಮನೋಭಾವನೆಯು ಸರ್ವವೂ ಬ್ರಹ್ಮಮಯವಾಗಿ ಇದೆಯೋ, ಆ ಬ್ರಹ್ಮಭಾವನೆಯು ಮುಕ್ತಿಯನ್ನು ಕೊಡುವುದಾಗಿರುವುದು. ಬ್ರಹ್ಮ ಜಗತ್ತುಗಳಿಗೆ ಭೇದವೆಂಬ ದೃಷ್ಟಿಯು (ಅವಿದ್ಯೆಯು)ಬಂಧಕಾರಿಯಾದ್ದರಿಂದ ಅದನ್ನು ಬಿಡತಕ್ಕದ್ದು.

ಮುಂದೆ ಜೀವನ್ಮುಕ್ತನಾದ ಜ್ಞಾನಿಯನ್ನು ಕುರಿತು ಶ್ರುತಿಯು ಉಪದೇಶ ಮಾಡುತ್ತದೆ.

## ಬಳಿಕ ಮಹೋಪನಿಷತ್ತಿನ ಆರನೆಯ ಅಧ್ಯಾಯದ ಸಾರವು ಹೇಳಲ್ಪಡುತ್ತದೆ

**ಮಂತ್ರ :** ಅಂತಃ ಸಂತ್ಯಕ್ತಸರ್ವಾಶೋ ವೀತರಾಗೋ ವಿವಾಸನಃ ।
ಬಹಿಃ ಸರ್ವಸಮಾಚಾರೋ ಲೋಕೇ ವಿಹರ
ವಿಜ್ವರಃ॥ ॥೧೦೯॥

ಟೀಕಾ : ಅಂತರಂಗದಲ್ಲಿ ವಿಷಯಾಭಿಲಾಷೆಯನ್ನು ಬಿಟ್ಟವರಾಗಿಯೂ, ಅನುರಾಗವಿಲ್ಲದವರಾಗಿಯೂ, ವಾಸನಾರಹಿತರಾಗಿಯೂ, ಇದ್ದೂ ಇಲ್ಲದಂತೆ ಸಂಸಾರಲೋಲರಾಗುತ್ತಾ ಮೋಹರಹಿತರಾಗಿ ವಿಹರಿಸುವರು.

**ಮಂತ್ರ :** ಬಹಿಃ ಕೃತ್ರಿಮಸಂರಂಭೋ ಹೃದಿ ಸಂರಂಭವರ್ಜಿತಃ ।
ಕರ್ತಾ ಬಹಿರಕರ್ತಾಂತರ್ಲೋಕೇ ವಿಹರ ಶುದ್ಧಧೀಃ॥೧೧೦॥

ಟೀಕಾ: ಬಾಹ್ಯದಲ್ಲಿ ಕಪಟಸಂಭ್ರಮದಿಂದ ಕೂಡಿ ಅಂತರಂಗದಲ್ಲಿ ಕಪಟರಹಿತನಾಗಿ ಹೊರಗೆ ಕರ್ಮವಾಡುವವನಂತೆ ಕಂಡರೂ ಅಂತರಂಗದಲ್ಲಿ ಅಕರ್ತೃವಾಗಿ ನಿರ್ಮೋಹದಿಂದ ಸಂಚರಿಸುವನು.

**ಬಳಿಕ ಜ್ಞಾನದ ಮಹತ್ವವು ಸಿದ್ಧಾಂತ ಕಪಿಲ ಗೀತೆಯ ಸಾರದ ಮೂಲಕ ಹೇಳಲ್ಪಡುತ್ತದೆ.**

**ಮಂತ್ರ :** ಸ್ನಾತಂ ತೇನ ಸಮಸ್ತತೀರ್ಥನಿಚಯೇ ಸರ್ವಾಪಿ
ದತ್ತಾವನಿಃ ।
ಯಜ್ಞಾಂಚಾಪಿ ಸಮಸ್ತಮಿಷ್ಟಮನಘಂ ದೇವಾಃ
ಸದಾ ಪೂಜಿತಾಃ॥
ಸಂಸಾರಾಚ್ಚ ಸಮುದ್ಧೃತಾಃ ಸ್ವಪಿತರಃ ತ್ರೈಲೋಕ್ಯ
ಪೂಜ್ಯೋಽಪ್ಯಸೌ ।
ಯಸ್ಯ ಬ್ರಹ್ಮವಿಚಾರಣೇಕ್ಷಣಮಿಹ ಸ್ಥೈರ್ಯಂ
ಮನಃ ಪ್ರಾಪ್ನುಯಾತ್ ॥೧೧೧॥

ಟೀಕಾ : ಯಾವ ಮಹಾತ್ಮನು ಇಹಲೋಕದಲ್ಲಿ, ಬ್ರಹ್ಮವಿಚಾರದಲ್ಲಿ ಒಂದು ಕ್ಷಣವಾದರೂ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಿ ಬ್ರಹ್ಮ ವಿಚಾರ ಮಾಡುತ್ತಾನೋ, ಅಂತಹ ಮಹಾತ್ಮನಿಗೆ ಮುಂದೆ ಹೇಳುವ ಫಲಗಳು ಪ್ರಾಪ್ತವಾಗುತ್ತವೆ. ಅವು ಯಾವುವೆಂದರೆ, ಸಕಲ ತೀರ್ಥಗಳಲ್ಲಿ ಸ್ನಾನ ಮಾಡಿದ ಫಲವೂ, ಭೂಮಂಡಲವನ್ನೆಲ್ಲ ದಾನ ಮಾಡಿದ

ಫಲವೂ ಸಮಸ್ತ ಯಜ್ಞಗಳನ್ನು ಮಾಡಿದ ಫಲವೂ ಮತ್ತು ಸಮಸ್ತ ದೇವತೆಗಳನ್ನು ಪೂಜಿಸಿದ ಫಲವೂ, ಅವನ ಪಿತೃಗಳಿಗೆಲ್ಲಾ ಪೂಜಿಸಿದ ಫಲವೂ, ಇಷ್ಟೇ ಅಲ್ಲದೇ ಅವರು ನರಕದಲ್ಲಿ ಬಿದ್ದಿದ್ದರೂ ಈ ಬ್ರಹ್ಮ ಧ್ಯಾನದಿಂದ ಉದ್ಧೃತರಾಗಿ ಮೂರು ಲೋಕಗಳಲ್ಲಿಯೂ ಅವನು ಪೂಜ್ಯನಾಗುವನು.

******

ಮಂತ್ರ : ಅನುಭೂತೇರಭಾವೇऽಪಿ ಬ್ರಹ್ಮಾಸ್ಮೀತ್ಯೇವ
ಚಿಂತ್ಯತಾವ್ ।
ಅಪ್ಯಸತ್ಪ್ರಾಪ್ಯತೇ ಧ್ಯಾನಾನ್ನಿತ್ಯಾಪ್ತಂ ಬ್ರಹ್ಮ ಕಿಂ ಪುನಃ ॥

ಅನುಭವವೆಂಬವುದು ಇಲ್ಲದೆ ಇದ್ದಾಗ್ಯೂ ನಾನು ಬ್ರಹ್ಮವೆಂತಲೇ ಚಿಂತಿಸಬೇಕು. ಭ್ರಮರವಲ್ಲದ ಕೀಟವು ಭ್ರಮರದ ಧ್ಯಾನದಿಂದ ಭ್ರಮರವಾಗುವಾಗುತ್ತಿರುವಲ್ಲಿ ನಿತ್ಯ ಪ್ರಾಪ್ತವಾದ ಸರ್ವಾತ್ಮಕಬ್ರಹ್ಮವು ಧ್ಯಾನದಿಂದ ಪ್ರಾಪ್ತವಾಗುವುದು. ಎಂಬುದರಲ್ಲಿ ಹೇಳತಕ್ಕದ್ದೇನಿದೆ,

ತಾವದ್ಗರ್ಜಂತಿ ಶಾಸ್ತ್ರಾಣಿ ಜಂಬುಕಾವಿಪಿನೇ ಯಥಾ ।
ನ ಗರ್ಜತಿ ಮಹಾಶಕ್ತಿರ್ಯಾವದ್ವೇದಾಂತ ಕೇಸರೀ ॥

ಹೇಗೆ ಎಲ್ಲಿಯವರೆಗೆ ಅರಣ್ಯದಲ್ಲಿ ಮಹಾಬಲಶಾಲಿಯಾದ ಸಿಂಹವು ಗರ್ಜನೆಮಾಡಿಲ್ಲವೋ, ಅಲ್ಲಿಯವರೆಗೆ ನರಿಗಳು ಕೂಗುವಂತೆ ಎಲ್ಲಿಯವರೆಗೆ ಮಹಾಬಲಿಷ್ಠನಾದ ವೇದಾಂತಿಯೆಂಬ ಸಿಂಹವು ಗರ್ಜನೆಮಾಡಿಲ್ಲವೋ, ಅಲ್ಲಿಯವರೆಗೆ ಶಾಸ್ತ್ರಾರಣ್ಯದಲ್ಲಿ ಭೇದವಾದಿಗಳೆಂಬ ನರಿಗಳು ಕೂಗುತ್ತವೆ.



ಓಂ ಶ್ರೀ ಗಣೇಶಾಯ ನಮಃ
ಶ್ರೀ ಸದ್ಗುರು ಶಾಂತಾನಂದಾಯ ನಮಃ

## ಮಹಾವಾಕ್ಯ ರತ್ನಾವಳಿ
## ಸಾರ್ಥಾಂತಿಕ ವಿಧಿ ವಾಕ್ಯಗಳು

**ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ । ಆತ್ಮಾನಮೇವಾವೇದಹಂ ಬ್ರಹ್ಮಾಸ್ಮೀತಿ ।**

ಈ ನಾಮ ರೂಪಾತ್ಮಕವಾದ ದೃಶ್ಯವಾದ ಸರ್ವ ಜಗತ್ತು ಬ್ರಹ್ಮವೇ ಆಗಿದೆ. ಇದು ಸತ್ಯವು. ಮತ್ತು ಶಾಂತನಾದ ಮುಮುಕ್ಷುವು ಜಗದುತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣವಾದದ್ದೇ ಬ್ರಹ್ಮವೆಂದು ಮನನ ಮಾಡಬೇಕು. ನಾನು ನನ್ನ ಆತ್ಮನನ್ನೇ ಬ್ರಹ್ಮವೆಂದು ತಿಳಿದುಕೊಂಡೆನು. ॥೧॥

**ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ ।**

ಎಲೈ ಮೈತ್ರೇಯಿ, ನಿಶ್ಚಯವಾಗಿಯೂ ಆತ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲೇ ಬೇಕು. ಅದಕ್ಕೆ ಸಾಧನಗಳಾದ ಶ್ರವಣ, ಮನನ-ಮತ್ತು ನಿದಿಧ್ಯಾಸನಗಳನ್ನು ಮಾಡಲೇಬೇಕು. ॥೨॥

**ಮಹತ್ಪದಂ ಜ್ಞಾತ್ವಾ ವೃಕ್ಷಮೂಲೇ ವಸೇತ್**

ಎಲ್ಲಕ್ಕಿಂತಲೂ ದೊಡ್ಡದಾದ ಬ್ರಹ್ಮವೇ ನಾನೆಂದು ತಿಳಿದುಕೊಂಡು ಮರದ ಬುಡದಲ್ಲಿ ವಾಸಮಾಡಬೇಕು. ॥೩॥

**ಸಚ್ಚಿದಾನಂದಾತ್ಮಾನಮದ್ವಿತೀಯಂ ಬ್ರಹ್ಮ ಭಾವಯೇತ್ ॥೪॥**

ಸಚ್ಚಿದಾನಂದನಾದ, ಅದ್ವಿತೀಯನಾದ ಈ ಆತ್ಮನೇ ಬ್ರಹ್ಮವೆಂದು ಚಿಂತಿಸಬೇಕು. ॥೪॥

**ಅಹಂ ಬ್ರಹ್ಮಾಸ್ಮೀತ್ಯನುಸಂಧಾನಂ ಕುರ್ಯಾತ್ ॥೫॥**

ನಾನೇ ಬ್ರಹ್ಮವೆಂದು ಅನುಸಂಧಾನವನ್ನು ಮಾಡಬೇಕು.

**ಸ ತಜ್ಜ್ಞೋ ಬಾಲೋನ್ಮತ್ತ ಪಿಶಾಚವಜ್ಜಡವೃತ್ತ್ಯಾ ಲೋಕಮಾಚರೇತ್ ॥೬॥**

ಬ್ರಹ್ಮವೇ ನಾನೆಂದು ತಿಳಿದ ಜ್ಞಾನಿಯು, ಬಾಲಕನಂತೆ, ಹುಚ್ಚನಂತೆ ಭೂತದಂತೆ ಜಡವಾದ ವೃತ್ತಿಯಿಂದ ಜನರಲ್ಲಿ ವ್ಯವಹರಿಸಬೇಕು.

**ಬ್ರಾಹ್ಮಣಃ ಸಮಾಹಿತೋ ಭೂತ್ವಾ ತತ್ತ್ವಂ ಪದೈಕ್ಯಮೇವ ಸದಾಽಭ್ಯಸೇತ್**

ಮುಮುಕ್ಷುವು ಏಕಾಗ್ರ ಚಿತ್ತನಾಗಿ ಜೀವ ಬ್ರಹ್ಮರ ಅಭೇದವನ್ನೇ ಯಾವಾಗಲೂ ಅಭ್ಯಾಸ ಮಾಡಬೇಕು. ॥೭॥

**ಸರ್ವತ್ರ ಅದ್ವೈತಬ್ರಹ್ಮಬುದ್ಧಿಂ ಕುರ್ಯಾತ್ ॥೮॥**

ಎಲ್ಲದರಲ್ಲಿ ಒಂದೇ ಬ್ರಹ್ಮವಿದೆ ಎಂದು ತಿಳಿಯಬೇಕು.

**ಆಶಾಂಬರೋ ನ ನಮಸ್ಕಾರೋ ನ ಸ್ವಾಹಾಕಾರೋ ನ ಸ್ವಧಾಕಾರೋ ನ ನಿಂದಾಸ್ತುತಿ ರ್ಯಾದೃಚ್ಛಿಕೋ ಭವೇತ್ ॥**

ಹತ್ತು ದಿಕ್ಕುಗಳೆಂಬ ಬಟ್ಟೆಯುಳ್ಳವನೂ, ಯಾರಿಗೂ ನಮಸ್ಕಾರ ಮಾಡದವನೂ, "ಕಾ ಕುಂ ಕರುಂ ಪ್ರಣಾಮ" ಯಜ್ಞಾದಿ ಕರ್ಮಗಳನ್ನು ಮಾಡದವನೂ, ಪಿತೃ ತರ್ಪಣಾದಿಗಳನ್ನು ಕೊಡದವನೂ, ಯಾರನ್ನೂ ನಿಂದಿಸದವನೂ ಸ್ತುತಿ ಮಾಡದವನೂ ಆಗಿ ಜ್ಞಾನಿಯು ತನ್ನ ಮನ ಬಂದಂತಿರಬೇಕು. ॥೮॥

**ಸರ್ವತಃ ಸ್ವರೂಪಮೇವ ಪಶ್ಯನ್ ಜೀವನ್ಮುಕ್ತಿಮವಾಪ್ಯ ಪ್ರಾರಬ್ಧ ಪ್ರತಿಭಾಸ ನಾಶಪರ್ಯಂತಂ ಸ್ವರೂಪಾನುಸಂಧಾನೇನ ವಸೇತ್ ॥೯॥**

ಎಲ್ಲ ಕಡೆಯಲ್ಲಿಯೂ ಅಸ್ತಿ ಭಾತಿ ಪ್ರಿಯವಾದ ತನ್ನ ಸ್ವರೂಪವನ್ನೇ ನೋಡುತ್ತಾ ಜೀವನ್ಮುಕ್ತಿಯನ್ನು ಪಡೆದು ಮೃಗ ಜಲದಂತೆ ಕಂಡು ಬರುವ ಪ್ರಾರಬ್ಧ ಕರ್ಮ ನಾಶವಾಗುವವರೆಗೆ ಸ್ವರೂಪಾನು ಸಂಧಾನ ಮಾಡುತ್ತಿರಬೇಕು. ॥೯॥

**ಸ್ವರೂಪಾನುಸಂಧಾನಂ ವಿನಾಽನ್ಯಥಾಚಾರೋ ನ ಭವೇತ್। ವೇದಾಂತಶ್ರವಣಂ ಕುರ್ವನ್ಯೋಗಂ ಸಮಾರಭೇತ್ ॥**

ಸ್ವರೂಪಾನುಸಂಧಾನವನ್ನು ಬಿಟ್ಟು ಬೇರೆ ಆಚಾರವುಳ್ಳವನಾಗಬಾರದು

ಉಪನಿಷತ್ತುಗಳನ್ನು ಕೇಳುತ್ತಾ ಜ್ಞಾನಯೋಗವನ್ನು ಮಾಡಲು ಪ್ರಾರಂಭಿಸಬೇಕು. ॥ ೧೦-೧೧ ॥

ಆಕುಂಚನೇನ ಕುಂಡಲಿನ್ಯಾಃ ಕಪಾಟಮುದ್ಘಾಟ್ಯ ಮೋಕ್ಷ
ದ್ವಾರಂ ವಿಭೇದಯೇತ್ ॥೧೨॥

ಆಕುಂಚನದಿಂದ (ಪ್ರಾಣಾಯಾಮದಿಂದ) ಕುಂಡಲಿ ಸರ್ಪದ ಹೆಡೆಯನ್ನು ಮೇಲೆತ್ತಿಸಿ ಮೋಕ್ಷದ್ವಾರನ್ನು (ಮುರಿಯಬೇಕು.)ತೆಗೆಯಿಸಬೇಕು ॥೧೨॥

ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಞಾನ ಆತ್ಮನಿ ।
ಜ್ಞಾನಂ ಆತ್ಮನಿ ಮಹತಿ ನಿಯಚ್ಛೇತ್ತದ್ಯಚ್ಛೆಚ್ಛಾಂತ
ಆತ್ಮನಿ ॥೧೩॥

ಪ್ರಾಜ್ಞನು ವಾಣಿಯನ್ನು ಮನದಲ್ಲಿಡಬೇಕು ಮನವನ್ನು ಬುದ್ಧಿಯಲ್ಲಿ ಲಯಮಾಡಬೇಕು. ಬುದ್ಧಿಯನ್ನು ಅದರ ಕಾರಣವಾದ ಮಹತತ್ತ್ವದಲ್ಲಿ ಲಯಮಾಡಬೇಕು. ಮಹತತ್ತ್ವವನ್ನು ಶಾಂತನಾದ ಆತ್ಮನಲ್ಲಿ ಲಯಮಾಡಬೇಕು ॥೧೩॥

ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪೂರುಷಃ ।
ಕಿಮಿಚ್ಛನ್ಕಸ್ಯ ಕಾಮಾಯ ಶರೀರಮನಸಂಜ್ವರೇತ್ ॥೧೪॥

ಪುರುಷನು ನಾನು ಈ ಆತ್ಮನೇ ಆಗಿದ್ದೇನೆಂದು ತನ್ನನ್ನು ತಾನು ತಿಳಿದಿದ್ದಾದರೆ, ಅವನು ಯಾವ ಫಲಕ್ಕಾಗಿ ಕರ್ಮಾದಿಗಳನ್ನು ಮಾಡಿ ಶರೀರಕ್ಕೆ ತಾಪವನ್ನುಂಟು ಮಾಡಿಯಾನು ? ॥೧೪॥

**ತಮೇವ ಧೀರೋ ವಿಜ್ಞಾಯ ಪ್ರಜ್ಞಾಂ ಕುರ್ವೀತ ಬ್ರಾಹ್ಮಣಃ ।**
**ನಾನು ಧ್ಯಾಯೆದ್ಬಹೂನ್ ಶಬ್ದಾನ್ವಾಚೋ ವಿಗ್ಲಾಪನಂ ಹಿ ತತ್ ॥೧೫॥**

ಬುದ್ಧಿವಂತನಾದ ಮುಮುಕ್ಷುವು ಸಚ್ಚಿದಾನಂದರೂಪನಾದ ಆತ್ಮನನ್ನೇ ತಾನೆಂದು ತಿಳಿದು ಜ್ಞಾನವನ್ನು ದೃಢಮಾಡಿಕೊಳ್ಳಬೇಕು; ಬಹಳ ಮಾತನಾಡಬಾರದು. ಅದು ವಾಣಿಗೆ ಶ್ರಮವನ್ನುಂಟುಮಾಡುತ್ತದೆ. ॥೧೫॥

**ಯತೋ ನಿರ್ವಿಷಯಸ್ಯಾಸ್ಯ ಮನಸೋ ಮುಕ್ತಿರಿಷ್ಯತೇ ।**
**ಅತೋ ನಿರ್ವಿಷಯಂ ನಿತ್ಯಂ ಮನಃ ಕಾರ್ಯಂ ಮುಮುಕ್ಷುಣಾ ।**

ಆತ್ಮನನ್ನು ತಿಳಿಯುವುದರಿಂದ ಮನವು ನಿರ್ವಿಷಯವಾದರೆ ಅದುವೇ ಮುಕ್ತಿಯಾಗಿದೆ. ಆದ್ದರಿಂದ ಮುಮುಕ್ಷು ಯಾವಾಗಲೂ ಮನವನ್ನು ವಿಷಯ ರಹಿತವಾದದ್ದನ್ನಾಗಿ ಮಾಡಬೇಕು. ॥೧೬-೧೭॥

**ಚಿತ್ತಮೇವ ಹಿ ಸಂಸಾರಸ್ತತ್ಪ್ರಯತ್ನೇನ ಶೋಧಯೇತ್ ।**
**ದೃಶ್ಯಂ ಅದೃಶ್ಯತಾಂ ನೀತ್ವಾ ಬ್ರಹ್ಮಾಕಾರೇಣ ಚಿಂತಯೇತ್ ॥**

(ಮನವೇ) ಚಿತ್ತವೇ ಸಂಸಾರವು. ಅದನ್ನು ಪ್ರಯತ್ನದಿಂದ ಶೋಧಿಸಬೇಕು. ದೃಶ್ಯವಾದ ಜಗತ್ತನ್ನು ಜ್ಞಾನದಿಂದ ಬಾಧಿಸಿ ಅದನ್ನು ಬ್ರಹ್ಮವೆಂದೇ ಚಿಂತಿಸಬೇಕು. ॥೧೮-೧೯॥

ಮಾಯಾಕಾರ್ಯಮಿದಂ ಭೇದಮಸ್ತಿ
ಚೇದ್ಬ್ರಹ್ಮಭಾವನಮ್ ।

ಮಾಯಾಕಾರ್ಯವಾದ ಈ ಜೀವಾದಿ ಭೇದಗಳಿದ್ದದ್ದಾದರೆ ಹಗ್ಗದಲ್ಲಿ ಕಂಡ ಸರ್ಪಾದಿಗಳನ್ನು ಹಗ್ಗವೆಂದೇ ತಿಳಿಯುವಂತೆ ಅದನ್ನು ಬ್ರಹ್ಮವೆಂದೇ ತಿಳಿಯಬೇಕು. ॥೨೦॥

ದೇಹೋಽಹಮಿತಿ ದುಃಖಂ ಚೇದ್ಬ್ರಹ್ಮಾಹಮಿತಿ ನಿಶ್ಚಯಃ

ದೇಹವು ನಾನೆಂಬ ಭಾವನೆಯು ನಿನಗೆ ದುಃಖವನ್ನುಂಟು ಮಾಡಿದ್ದರೆ (ಮಾಡುತ್ತದೆ) ನಾನೇ ಬ್ರಹ್ಮನೆಂದು ನಿಶ್ಚಯ ಮಾಡು. ॥೨೧॥

ಹೃದಯ ಗ್ರಂಥಿರಸ್ತಿತ್ವೇ ಛೇದನೇ ಬ್ರಹ್ಮ
ಚಕ್ರಕಮ್ । ॥೨೨॥

ಸಂಶಯೇ ಸಮನು ಪ್ರಾಪ್ತೇ ಬ್ರಹ್ಮ ನಿಶ್ಚಯ-
ಮಾಪ್ನುಯಾತ್ ॥೨೩॥

ನಿನಗೆ ಕಾಮಾದಿಗಳೆಂಬ ಹೃದಯದಗಂಟು ಇದ್ದದ್ದಾದರೆ, ಬ್ರಹ್ಮವೇ ನಾನೆಂಬ ಚಕ್ರದಿಂದ ಅದನ್ನು ಕತ್ತರಿಸಿಕೋ, ನಾನು ಜೀವನೋ,

ದೇಹವೋ, ಬ್ರಹ್ಮವೋ ಎಂದು ಸಂಶಯ ಬಂದರೆ ಬ್ರಹ್ಮವೆಂದೇ ನಿಶ್ಚಯ ಮಾಡಬೇಕು.॥೨೨-೨೩

ವಿಜ್ಞೇಯೋಽಕ್ಷರ ತನ್ಮಾತ್ರೋ ಜೀವಿತಂ ಚಾಪಿ
ಚಂಚಲಮ್ ॥೨೪॥
ವಿಹಾಯ ಶಾಸ್ತ್ರ ಜಾಲಾನಿ ಯತ್ಸತ್ಯಂ
ತದುಪಾಸ್ಯತಾಮ್ ॥೨೫॥

ಬದುಕು ಮಿಂಚಿನಂತೆ ಬಹಳ [ಕ್ಷಣಿಕವಾಗಿದೆ] ಚಂಚಲವಾಗಿದೆ. ಆದ್ದರಿಂದ ಅನೇಕ ಶಾಸ್ತ್ರಗಳೆಂಬ ಜಾಲಗಳನ್ನು ಬಿಟ್ಟು, ಯಾವುದು ಸತ್ಯವಾಗಿದೆಯೋ ಅದನ್ನು ಬೇಗನೆ ತಿಳಿಯಬೇಕು ॥೨೪-೨೫॥

ಯಸ್ಯ ಸ್ತ್ರೀ ತಸ್ಯ ಭೋಗೇಚ್ಛಾ ನಿಸ್ತ್ರೀಕಸ್ಯ
ಕ್ವ ಭೋಗಭೂಃ। ॥೨೬॥
ಸ್ತ್ರಿಯಂ ತ್ಯಕ್ತ್ವಾ ಜಗತ್ತ್ಯಕ್ತಂ ಜಗತ್ತ್ಯಕ್ತ್ವಾ
ಸುಖೀ ಭವ ॥ ॥೨೭॥

ಯಾವನಿಗೆ ಸ್ತ್ರೀಯು ಇದ್ದಾಳೆಯೋ, ಅವನಿಗೆ ಭೋಗದ ಇಚ್ಛೆಯುಂಟಾಗುತ್ತದೆ. ಸ್ತ್ರೀ ಇಲ್ಲದವನಿಗೆ ಭೋಗವೆಲ್ಲಿದೆ ? ಆದ್ದರಿಂದಸ್ತ್ರೀಯನ್ನು ಬಿಟ್ಟು ಜಗತ್ತನ್ನುಬಿಟ್ಟು ಸುಖಿಯಾಗು॥ ೨೬-೨೭)

ಚಿತ್ತೇ ಕಾರಣಮರ್ಥಾನಾಂ ತಸ್ಮಿನ್ಸತಿ ಜಗತ್ರಯಮ್।೨೮
ತಸ್ಮಿನ್ ಕ್ಷೀಣೇ ಜಗತ್ ಕ್ಷೀಣಂ ತಚ್ಚಿಕಿತ್ಸ್ಯಂ
ಪ್ರಯತ್ನತಃ ॥೨೯॥

ಅರ್ಥ ಮತ್ತು ಅನರ್ಥಗಳಿಗೆ ಚಿತ್ತವು ಕಾರಣವಾಗಿದೆ. ಅದು ಇದ್ದರೆ ಸ್ವರ್ಗಾದಿ ಮೂರು ಲೋಕಗಳಿವೆ. ಅದು ಕ್ಷಯವಾಗುತ್ತಿರಲು ಜಗತ್ತು ಕ್ಷಯವಾಗುತ್ತದೆ. ಆದ್ದರಿಂದ ಚಿತ್ತವನ್ನು ಪ್ರಯತ್ನದಿಂದ ಕ್ಷಯ ಮಾಡಬೇಕು. ॥೨೮-೨೯

ಸುಪ್ತೇರುತ್ಥಾಯ ಸುಪ್ತ್ಯಂತಂ ಬ್ರಹ್ಮೈಕಂ ಪ್ರವಿಂಚಿಕ್ತ್ಯ
ತಾವ್ । ಗಚ್ಛಂಸ್ತಿಷ್ಠನ್ನುಪವಿಶಂಶ್ಛಯಾನೋ
ವಾಽನ್ಯಥಾಽಪಿ॥

ನಿದ್ರೆಯಿಂದೆದ್ದು ಪುನಃ ನಿದ್ರೆಹತ್ತುವವರೆಗೆ ಬ್ರಹ್ಮ ಒಂದನ್ನೇ ಚಿಂತಿಸಬೇಕು. ಹೋಗುತ್ತಿರುವಾಗ, ನಿಂತಿರುವಾಗ, ಕುಳಿತುಕೊಳ್ಳುವಾಗ ಮಲಗಿಕೊಳ್ಳುವಾಗ ಇನ್ನೇನನ್ನಾದರೂ ಮಾಡುವಾಗಲೂ ಬ್ರಹ ಒಂದನ್ನೇ ಚಿಂತಿಸಬೇಕು. ॥೩೦-೩೧॥

ಯಥೇಚ್ಛಯಾ ವಸೇದ್ವಿದ್ವಾನಾತ್ಮಾರಾಮಃ ಸದಾ
ಮುನಿಃ । ॥೩೨॥

ಸದಾ ಆತ್ಮಾರಾಮನಾದ ಮುನಿಯು ತನ್ನ ಮನಬಂದಂತೆ ವಾಸಮಾಡಬೇಕು. ॥೩೨॥

ಜ್ಯೋತಿರ್ಲಿಂಗಂ ಭ್ರೂವೋರ್ಮಧ್ಯೇ ನಿತ್ಯಂ ಧ್ಯಾಯೇ
ತ್ಸದಾ ಯತಿಃ ।

ಯತಿಯು ಪ್ರತಿದಿನವೂ ಯಾವಾಗಲೂ ತನ್ನ ಎರಡೂ ಹುಬ್ಬುಗಳ

ಮಧ್ಯದಲ್ಲಿ ಜ್ಯೋತಿರೂಪವಾದ ಲಿಂಗವನ್ನೂ ಧ್ಯಾನಮಾಡಬೇಕು॥೩೩॥

**ಆತ್ಮಾನಮಾತ್ಮನಃ ಸಾಕ್ಷಾದ್ಬ್ರಹ್ಮಬುದ್ಧ್ಯಾ ಸುನಿಶ್ಚಲಮ್**

ತನ್ನ ಆತ್ಮವನ್ನು ನೇರವಾಗಿ ಬ್ರಹ್ಮವೆಂದೇ ಚನ್ನಾಗಿ ನಿಶ್ಚಯಿಸಬೇಕು. ॥೩೪॥

**ದೇಹಜಾತ್ಯಾದಿ ಸಂಬಂಧಾನ್ವರ್ಣಾಶ್ರಮ ಸಮನ್ವಿತಾನ್ ।**
**ವೇದಶಾಸ್ತ್ರ ಪುರಾಣಾನಿ ಪದಪಾಂಸುಮಿವ ತ್ಯಜೇತ್ ॥೩೭-೩೮॥**

ದೇಹ, ಜಾತಿ, ಕುಲ, ಗೋತ್ರಗಳ ಸಂಬಧಿಯು ಮತ್ತು ಬ್ರಾಹ್ಮಣಾದಿ ವರ್ಣ ಹಾಗೂ ಬ್ರಹ್ಮಚರ್ಯಾದಿ ಆಶ್ರಮಗಳ ಸಂಬಂಧಿಯು ವೇದ, ಶಾಸ್ತ್ರ ಮತ್ತು ಪುರಾಣಗಳನ್ನು ಕಾಲಿನ ಧೂಳಿನಂತೆ ತ್ಯಾಗಮಾಡಬೇಕು. ॥೩೫-೩೬॥

**ಸಂದಿಗ್ಧಃ ಸರ್ವಭೂತಾನಾಂ ವರ್ಣಾಶ್ರಮ ವಿವರ್ಜಿತಃ ।**
**ಅಂಧವಜ್ಜಡವಚ್ಚಾಪಿ ಮೂಕವಚ್ಚ ಮಹೀಂ ಚರೇತ್ ॥ ॥೪೧-೪೨॥**

ಬ್ರಾಹ್ಮಣಾದಿ ವರ್ಣಗಳನ್ನು ಬ್ರಹ್ಮಚರ್ಯಾದಿ ಆಶ್ರಮಗಳನ್ನು ಬಿಟ್ಟಿರುವ ಮುನಿಯು ಎಲ್ಲ ಮಾನವರಿಗೂ ಇವನು ಯಾವ ಜಾತಿ ವರ್ಣದವನೆಂದು ಸಂಶಯಕ್ಕೆ ವಿಷಯನಾಗಿ ಕುರುಡನಂತೆ ಹುಚ್ಚನಂತೆ ಮೂಕನಂತೆ ಭೂಮಿಯಲ್ಲಿ ತಿರುಗಾಡಬೇಕು.

ಏಕಾಕೀ ನಿಃಸ್ಪೃಹಸ್ತಿಷ್ಠೇನ್ನ ಹಿ ಕೇನ ಸಹಾಲಪೇತ್ ।
ಉದ್ಯನ್ನಾರಾಯಣೇ ತ್ಯೇವಂ ಪ್ರತಿವಾಕ್ಯಂ ಸದಾ ಮುನಿಃ॥

ಜ್ಞಾನಿಯು ಆಸೆಯಿಲ್ಲದವನಾಗಿ ಒಬ್ಬನೇ ಇರಬೇಕು. ಯಾರೊಡನೆಯೂ ಮಾತನಾಡಬಾರದು. ಮುನಿಯು ಸದಾ ಪ್ರತಿಯೊಂದು ವಾಕ್ಯವನ್ನು ಉಚ್ಚರಿಸುವಾಗ ನಾರಾಯಣ ಶಿವ ಶಿವಾ ಎಂದೇ ಹೇಳಬೇಕು. ॥೩೮-೩೯॥

ಮುನಿಃ ಕೌಪೀನವಾಸಾಃ ಸ್ಯಾನ್ನಗ್ನೋ ವಾ ಧ್ಯಾನ ತತ್ಪರಃ ।

ಧ್ಯಾನದಲ್ಲಿ ತೊಡಗಿದ ಮುನಿಯು ಕೌಪೀನ ಮತ್ತು ಬಟ್ಟೆಗಳನ್ನು ಉಟ್ಟುಕೊಳ್ಳಬೇಕು. ಅಥವಾ ದಿಗಂಬರನಾಗಿರಬಹುದು. ॥೩೯-೪೦॥

ಅಧ್ಯಾತ್ಮರತಿರಾಸೀನೋ ನಿರಪೇಕ್ಷೋ ನಿರಾಶಿಷಃ ।
ಆತ್ಮನೈವ ಸಹಾಯೇನ ಸುಖಾರ್ಥೀ ವಿಚರೇದಿಹ ॥ ॥೪೦-೪೧॥

ಅಧ್ಯಾತ್ಮದಲ್ಲಿ ಪ್ರೀತಿಯುಳ್ಳ ಆಸೆ ಆಮಿಷೆಗಳಿಲ್ಲದ ಸುಖಾಪೇಕ್ಷೆಯುಳ್ಳ ಯತಿಯು ಈ ಲೋಕದಲ್ಲಿ ತಾನೊಬ್ಬನೇ ಸಂಚರಿಸಬೇಕು. ಯಾರ ಸಹಾಯವನ್ನೂ (ಜೊತೆಯನ್ನು) ಬಯಸಬಾರದು. ॥

ಯದ್ಯತ್ಪಶ್ಯತಿ ಚಕ್ಷುರ್ಭ್ಯಾಂ ತತ್ತದಾತ್ಮೇತಿ
ಭಾವಯೇತ್ ।
ಯದ್ಯಚ್ಛೃಣೋತಿ ಕರ್ಣಾಭ್ಯಾಂ ತತ್ತದಾತ್ಮೇತಿ
ಭಾವಯೇತ್ ॥

ನೀನು ಕಣ್ಣುಗಳಿಂದ ಯಾವ ಯಾವದನ್ನು ನೋಡುತ್ತಿಯೋ, ಅದೆಲ್ಲವನ್ನೂ ಆತ್ಮನೆಂದೇ ಭಾವಿಸಬೇಕು. ಕಿವಿಗಳಿಂದ ಯಾವ ಯಾವದನ್ನು ಕೇಳುತ್ತಿಯೋ ಅದೆಲ್ಲವನ್ನು ಆತ್ಮನೆಂದೇ ಚಿಂತಿಸಬೇಕು. ॥೪೨॥

ಲಭತೇ ನಾಸಯಾ ಯದ್ಯತ್ತದಾತ್ಮೇತಿ ಭಾವಯೇತ್ ।
ಜಿಹ್ವಯಾ ಯದ್ರಸಂ ಹ್ಯತ್ತಿ ತತ್ತದಾತ್ಮೇತಿ ಭಾವಯೇತ್ ।
ತ್ವಚಾ ಯದ್ಯತ್ ಸ್ಪೃಶೇದ್ಯೋಗೀ ತತ್ತದಾತ್ಮೇತಿ
ಭಾವಯೇತ್ ॥

ನೀನು ಮೂಗಿನಿಂದ ಯಾವ ಯಾವುದನ್ನು ಮೂಸುತ್ತಿಯೋ, ಅದೆಲ್ಲವನ್ನೂ ಆತ್ಮನೆಂದೇ ಭಾವಿಸಬೇಕು. ಅದರಂತೆ ನಾಲಗೆಯಿಂದ ಯಾವ ಯಾವ ರಸವನ್ನು ಸ್ವೀಕರಿಸುತ್ತಿಯೋ, ಚರ್ಮೇಂದ್ರಿಯದಿಂದ ಯಾವ ಯಾವುದನ್ನು ಮುಟ್ಟುತ್ತಿಯೋ, ಅದೆಲ್ಲವನ್ನು ಆತ್ಮನೆಂದೇ ಭಾವಿಸಬೇಕು ॥೪೪॥

ದೃಷ್ಟಿಂ ಜ್ಞಾನಮಯೀಂ ಕೃತ್ವಾ ಪಶ್ಯೇದಬ್ರಹ್ಮ
ಮಯಂ ಜಗತ್ ।

**ದೃಷ್ಟದರ್ಶನದೃಶ್ಯಾನಾಂ ವಿರಾಮೋ ಯತ್ರ ವಾ ಭವೇತ್।**
**ದೃಷ್ಟಿಸ್ತತ್ರೈವ ಕರ್ತವ್ಯಾ ನ ನಾಸಾಗ್ರಾವಲೋಕಿನೀ॥**

(ವೃತ್ತಿ) ದೃಷ್ಟಿಯನ್ನು ಜ್ಞಾನಮಯವನ್ನಾಗಿ ಮಾಡಿಕೊಂಡು ಜಗತ್ತನ್ನು ಬ್ರಹ್ಮಮಯವನ್ನಾಗಿ ನೋಡಬೇಕು. ಎಲ್ಲಿ ನೋಡುವವನ, ನೋಡುವ ಮತ್ತು ನೋಡಿಸಿಕೊಳ್ಳುವವುಗಳಿಗೆ ಕೊನೆಯಾಗುತ್ತದೆಯೋ, ದೃಷ್ಟಿಯನ್ನು ಅಲ್ಲಿಯೇ ಇಡಬೇಕು. ಮೂಗಿನ ತುದಿಯನ್ನು ನೋಡ ಬಾರದು. ॥೪೪॥

**ದೇವಾಗ್ನ್ಯಗಾರೇ ತರುಮೂಲೇ ಗುಹಾಯಾಂ ವಸೇದ**
**ಸಂಗೋಽಲಕ್ಷಿತಶೀಲವೃತ್ತಃ ನಿರಿಂಧನ ಜ್ಯೋತಿರಿವೋ**
**ಪಶಾಂತೋ ನ ಚೋದ್ವಿಜೇದುದ್ವಿಜೇ ದ್ಯತ್ರಕುತ್ರ ॥**

ಮತಿಯು ದೇವಾಲಯ, ಅಗ್ನಿಶಾಲೆ, ಮರದಬುಡ ಮತ್ತು ಗವಿಗಳಲ್ಲಿ ಅಸಂಗನಾಗಿ ಶೀಲ ಮತ್ತು ನಡತೆಗಳನ್ನು ಉಪೇಕ್ಷಿಸಿ ವಾಸಮಾಡಬೇಕು, ಎಣ್ಣೆ ತೀರಿದ ದೀಪದಂತೆ ಶಾಂತನಾಗಿ ಯಾರನ್ನೂ ಉದ್ವೇಗಗೊಳಿಸ ಗೊಳಿಸಬಾರದು. ಎಲ್ಲಿಯೂ ಉದ್ವೇಗಗೊಳ್ಳಬಾರದು. ॥೪೫॥

**ಶಾಂತೋ ದಾಂತ ಉಪರತಸ್ತಿತಿಕ್ಷು ರ್ಯೋಽನೂ ಚಾನೋ**
**ಹ್ಯಭಿಜಜ್ಞಾ ಸಮಾನಃ ।**

ಒಳಹೊರಗಿನ ಇಂದ್ರಿಯಗಳನ್ನು ನಿಗ್ರಹಿಸಿದವನಾದ ವಿಷಯಗಳಲ್ಲಿ ವಿರತಿಯುಳ್ಳ, ದ್ವಂದ್ವಗಳನ್ನು ಸಹಿಸುವ ವೇದವನ್ನೋದಿದ ಯತಿಯು ಸರ್ವದರಲ್ಲಿ ಸಮನಾಗಿರುತ್ತಾನೆ. ॥೪೬॥

ತ್ಯಕ್ತೇಷಣೋ ಹ್ಯನೃಣಸ್ತಂ ವಿದಿತ್ವಾ ಮೌನೀ ವಸೇದಾಶ್ರಮೇ ಯತ್ರ ಕುತ್ರ

ಈ ಪುತ್ರಾದಿಗಳ ಆಸೆಯಿಲ್ಲದ ಋಣತ್ರಯಗಳಿಲ್ಲದ ಮೌನಿಯು ಯಾವುದಾವರೊಂದು ಆಶ್ರಮದಲ್ಲಿರಬಹುದು. ॥೪೭॥

ಯಮೈಶ್ಚ ನಿಯಮೈಶ್ಚೈವ ಹ್ಯಾಸನೈಶ್ಚ ಸುಸಂಯತಃ ।
ನಾಡೀಶುದ್ಧಿಂ ಚ ಕೃತ್ವಾದೌ ಪ್ರಾಣಾಯಾಮಂ ಸಮಾಚರೇತ್ ॥

ಮೊದಲು ಯಮಾಂಗಗಳಿಂದ ನಿಯಮದ ಅಂಗಗಳಿಂದ ಮತ್ತು ಆಸನಗಳಿಂದ ದೇಹೇಂದ್ರಿಯಗಳನ್ನು ಚನ್ನಾಗಿ ನಿಗ್ರಹಿಸಿ ನಾಡಿಶುದ್ಧಿಯನ್ನು ಮಾಡಿಕೊಂಡು ನಂತರ ಪ್ರಾಣಾಯಾಮವನ್ನು ಮಾಡಬೇಕು.

ಸರ್ವಚಿಂತಾಂ ಪರಿತ್ಯಜ್ಯ ಸಾವಧಾನೇನ ಚೇತಸಾ ।
ನಿರ್ವಿಕಲ್ಪಃ ಪ್ರಸನ್ನಾತ್ಮಾ ಪ್ರಾಣಾಯಾಮಂ ಸಮಾಚರೇತ್ ॥

ಮರುದಭ್ಯಸನಂ ಸರ್ವಂ ಮನೋಯುಕ್ತಂ ಸಮಭ್ಯಸೇತ್
ಇತರತ್ರ ನ ಕರ್ತವ್ಯಾ ಮನೋವೃತ್ತಿರ್ಮನೀಷಿಣಾ ॥

ಎಚ್ಚರಿಕೆಯುಳ್ಳ (ಏಕಾಗ್ರವಾದ) ಮನಸ್ಸಿನಿಂದ ಸರ್ವ ಚಿಂತೆಗಳನ್ನು ಬಿಟ್ಟು ಕಲ್ಪನೆಗಳಿಲ್ಲದ, ಶುದ್ಧಾಂತಃಕರಣ ಉಳ್ಳ ಯತಿಯು ಪ್ರಾಣಾಯಾಮವನ್ನು ಮಾಡಬೇಕು. ಬುದ್ಧಿವಂತನಾದ ಅವನು ತನ್ನ ವೃತ್ತಿಗಳನ್ನು ವಿಷಯಗಳ ಕಡೆ ಹರಿಯಗೊಡಬಾರದು. ಹೀಗೆಂದು ಮೊದಲನೆ ಪ್ರಕರಣವು ಮುಗಿದುದು. ॥೪೯-೫೦॥

ಶ್ರೀ ಗಣೇಶಾಯ ನಮಃ

ಶ್ರೀ ಗುರುಭ್ಯೋ ನಮಃ

## ಮಹಾವಾಕ್ಯ ರತ್ನಾವಳಿ

### ಬಂಧ ಮೋಕ್ಷದ ಸ್ವರೂಪವನ್ನು ಹೇಳುವ ವಾಕ್ಯಗಳು

**ದೇಹಾದೀಽನಾತ್ಮತ್ವೇನಾಭಿಮನ್ಯತೇ ಸೋಽಭಿಮಾನ ಆತ್ಮನೋ ಬಂಧಃ ॥ ತನ್ನಿವೃತ್ತಿರ್ಮೋಕ್ಷಃ ॥**

ಟೀಕಾ: ಸ್ಥೂಲದೇಹವೇ ಮೊದಲುಗೊಂಡು ಮೂಲ ಅಹಂಕಾರದವರೆಗಿರುವ ಅನಾತ್ಮಗಳನ್ನು ತಾನೆಂದು ಅಭಿಮಾನಿಸಿದರೆ, ಆ ಅಭಿಮಾನವೇ ತನಗೆ ಬಂಧವು. ಆ ಅನಾತ್ಮ ಅಭಿಮಾನದ ನಿವೃತ್ತಿಯೇ ಮೋಕ್ಷವು. ॥೧॥

**ದೇವಮನುಷ್ಯಾದ್ಯುಪಾಸನಾಕಾಮ ಸಂಕಲ್ಪೋ ಬಂಧಃ॥**

ಟೀಕಾ : ಇಂದ್ರಾದಿ ದೇವತೆಗಳ ರಾಜ ಮತ್ತು ಶ್ರೀಮಂತ ಮೊದಲಾದವರ ಸೇವೆ ಮಾಡಬೇಕೆಂಬ ಬಯಕೆಯ ಸಂಕಲ್ಪವೇ ಬಂಧವು ॥೨॥

**ಕರ್ತೃತ್ವಾದ್ಯಹಂಕಾರ ಸಂಕಲ್ಪೋ ಬಂಧಃ**

ಟೀಕಾ : ನಾನೇ ಕರ್ಮವನ್ನು ಮಾಡಬೇಕು ಅದರ ಫಲವನ್ನು ಅನುಭವಿಸಬೇಕು ಎಂಬ ಸಂಕಲ್ಪವೇ ಬಂಧವು. ॥೩॥

ಅಣಿಮಾದ್ಯಷ್ಟೈಶ್ವರ್ಯಾಶಾಸಿದ್ಧಿ ಸಂಕಲ್ಪೋ ಬಂಧಃ ॥

ಟೀಕಾ : ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ ಎಂಬ ಅಷ್ಟ ಮಹಾಸಿದ್ಧಿಗಳನ್ನು ಪಡೆದುಕೊಳ್ಳಬೇಕೆಂಬ ಸಂಕಲ್ಪವೇ ಬಂಧವು. ॥೪॥

ಯಮಾದ್ಯಷ್ಟಾಂಗ ಯೋಗ ಸಂಕಲ್ಪೋ ಬಂಧಃ ॥

ಟೀಕಾ : ಯಮ, ನಿಯಮ, ಆಸನ, ಪ್ರಾಣಾಯಾಮ ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿಗಳೆಂಬ ಎಂಟು ಅಂಗಗಳಿಂದ ಕೂಡಿದ ಯೋಗ ಮಾಡಬೇಕೆಂಬ ಸಂಕಲ್ಪವೇ ಬಂಧವು. ॥೫॥

ಕೇವಲಂ ಮೋಕ್ಷಾಪೇಕ್ಷಾಕಾಮಸಂಕಲ್ಪೋ ಬಂಧಃ ॥

ಟೀಕಾ : ಕೇವಲ ಮೋಕ್ಷವನ್ನು ಪಡೆಯಬೇಕೆಂಬ ಬಯಕೆಯಿಂದುಂಟಾದ ಸಂಕಲ್ಪವು ಬಂಧನವು. ॥೬॥

ಸಂಕಲ್ಪ ಸಂಭವೋ ಬಂಧಃ ॥

ಟೀಕಾ : ಯಾವುದೇ ವಿಷಯಕವಾದ ಸಂಕಲ್ಪ ಮಾತ್ರ ಉತ್ಪನ್ನವಾದರೇ ಅದು ಬಂಧನವು ॥೭॥

ನಿತ್ಯಾನಿತ್ಯವಸ್ತುವಿಚಾರಾದನಿತ್ಯ ಸಂಸಾರ ಸುಖ ದುಃಖ ವಿಷಯ ಸಮಸ್ತ ಕ್ಷೇತ್ರಮಮತಾಬಂಧಕ್ಷಯೋ ಮೋಕ್ಷಃ ॥

ಟೀಕಾ : ನಿತ್ಯಯಾವುದು ಅನಿತ್ಯ ಯಾವುದು ಎಂಬ ವಸ್ತುಗಳ ವಿಚಾರದಿಂದ, ಎಲ್ಲರ ಆತ್ಮವಾದ ಬ್ರಹ್ಮವೇ ನಿತ್ಯವು, ಅದಕ್ಕಿಂತಲೂ ಬೇರಾದ ಅನಿತ್ಯವಾದ ಪ್ರಪಂಚದಲ್ಲಿ ಸುಖ ದುಃಖಗಳಿಗೆ ಕಾರಣವಾದ ದೇಹ, ಅದಕ್ಕೆ ಸಂಬಂಧಪಟ್ಟ ಧನ, ಕನಕ, ವಸ್ತ್ರ, ವಾಹನಾದಿ ವಿಷಯಗಳಲ್ಲಿ ನಾನು ನನ್ನದೆಂಬ ಭಾವನಾರೂಪವಾದ ಬಂಧದ ನಾಶವು, ಮೋಕ್ಷವು. ॥೮॥

ಮನ ಏವ ಮನುಷ್ಯಾಣಾಂ ಕಾರಣಂ ಬಂಧ
ಮೋಕ್ಷಯೋಃ ।
ಬಂಧಾಯ ವಿಷಯಾಸಕ್ತಂ ಮುಕ್ತ್ಯೈ
ನಿರ್ವಿಷಯಂ ಸ್ಮೃತಮ್ ॥

ಟೀಕಾ : ಮಾನವರ ಬಂಧಮೋಕ್ಷಗಳಿಗೆ ಮನಸ್ಸೇ ಕಾರಣವು, ವಿಷಯಾಸಕ್ತವಾದ ಮನಸ್ಸು ಬಂಧನಕ್ಕೂ ವಿಷಯರಹಿತವಾದ ಮನಸ್ಸು ಮೋಕ್ಷಕ್ಕೂ ಕಾರಣವಾಗಿದೆ ಎಂದು ಹೇಳಲ್ಪಟ್ಟಿದೆ. ॥೯॥

ಮಮೇತಿ ಬಧ್ಯತೇ ಜಂತುಃ ನ ಮಮೇತಿ
ವಿಮುಚ್ಯತೇ ।

ಟೀಕಾ : ಜೀವನು ನನ್ನದು ನನ್ನದು ಎಂಬ ಭಾವನೆಯಿಂದ ಬಂಧಿತನಾಗುತ್ತಾನೆ. ನನ್ನದೆಂಬ ಭಾವನೆಯನ್ನು ಬಿಟ್ಟಾಗ ಮುಕ್ತನಾಗುತ್ತಾನೆ. ॥೧೦॥

ದಾರಾ ಇಮೇ ಮೇ ತನಯಾ ಇಮೇ ಮೇ
ಭೃತ್ಯೋ ಇಮೇ ಮೇ ಪಶವೋ ಇಮೇ ಮೇ।
ಏವಂ ಬ್ರುವನ್ ಮೇಷಸಮೋ ಮನುಷ್ಯಃ
ಮೇ ಮೇ ಬ್ರುವನ್ ಕಾಲವೃಕೇನ ನೀತಃ ॥

ಅರ್ಥ=ಹೆಂಡರು ನನ್ನವರು, ಮಕ್ಕಳು ನನ್ನವರು, ಸೇವಕರು ನನ್ನವರು, ಪಶುಗಳು ನನ್ನವು–ಈ ಪ್ರಕಾರ ಹೇಳುತ್ತಾ ಕುರಿಗೆ ಸಮಾನನಾದ ಮನುಷ್ಯನು ಮೇ! ಮೇ! ಎಂದು ಹೇಳುತ್ತಾ ಕಾಲವೆಂಬತೋಳದಿಂದ ನಡೆಯಿಸಿಕೊಂಡು ಹೋಗುತ್ತಾನೆ. ॥೧೧॥

ಮಮತ್ವೇನ ಭವೇಜ್ಜೀವೋ
ನಿರ್ಮಮತ್ವೇನ ಕೇವಲಃ ॥

ಸ್ತ್ರೀ ಪುತ್ರ ಗೃಹಾದಿಗಳಲ್ಲಿ ನನ್ನದೆಂಬ ಭಾವನೆಯಿಂದ ಜೀವನಾಗಿದ್ದಾನೆ. ನನ್ನದೆಂಬ ಭಾವನೆಯನ್ನು ಬಿಟ್ಟರೆ ಕೇವಲ ಬ್ರಹ್ಮಸ್ವರೂಪನು. ॥೧೨॥

ಸ್ವಸಂಕಲ್ಪವಶಾದ್ಬದ್ಧೋ ನಿಸ್ಸಂಕಲ್ಪಾದ್ವಿಮುಚ್ಯತೇ ॥

ಜೀವನನ್ನು ಯಾರೂ ಕಟ್ಟಿಲ್ಲ ತನ್ನ ಸಂಕಲ್ಪದಿಂದಲೇ ಬದ್ಧನಾಗಿದ್ದಾನೆ. ಸರ್ವಸಂಕಲ್ಪಗಳನ್ನು ಬಿಟ್ಟರೆ ತಾನು ಮುಕ್ತನಾಗುತ್ತಾನೆ. ॥೧೩॥

ದ್ರಷ್ಟಾ ದೃಶ್ಯವಶಾತ್ ಬದ್ಧಃ ದೃಶ್ಯಾಭಾವೇ
ವಿಮುಚ್ಯತೇ ||

ಜಾಗ್ರತ್ಸ್ವಪ್ನ ಪ್ರಪಂಚವನ್ನು ನೋಡುವವನಾದ ಜೀವನು ನಾಮರೂಪಾತ್ಮಕವಾದ ಪ್ರಪಂಚ ಕಾಣುತ್ತಿರುವದರಿಂದ ಅದರಲ್ಲಿ ಆಸಕ್ತನಾಗಿ ಬದ್ಧನಾಗಿದ್ದಾನೆ. ದೃಶ್ಯ ಪ್ರಪಂಚವು ಕಾಣದಿರುತ್ತಿರಲು ಮುಕ್ತನಾಗುತ್ತಾನೆ. ಅಂದರೆ ದೃಷ್ಟಿ ಸೃಷ್ಟಿವಾದವೆಂಬ ಭಾವವು. ||೧೪||

ಇಚ್ಛಾಮಾತ್ರಂ ಅವಿದ್ಯೇಯಂ
ತನ್ನಾಶೋ ಮೋಕ್ಷ ಉಚ್ಯತೇ ||

ಇಚ್ಛೆ ಮಾತ್ರ ಉಂಟಾದರೆ ಆದುವೇ ಅಜ್ಞಾನವು ಅಂದರೆ ಅಜ್ಞಾನಿಯೇ ಕಾಮನೆಯುಳ್ಳವನಾಗುತ್ತಾನೆಂದು ತಾತ್ಪರ್ಯವು. ಆ [ಅಜ್ಞಾನದ] ಇಚ್ಛೆಯು ನಾಶವೇ ಮೋಕ್ಷವೆಂದು ಹೇಳಲ್ಪಡುತ್ತದೆ. ||೧೫||

ಭೋಗೇಚ್ಛಾ ಮಾತ್ರಕಂ ಬಂಧಃ
ತತ್ತ್ಯಾಗೋ ಮೋಕ್ಷ ಉಚ್ಯತೇ ||

ಕೇವಲ ಭೋಗಗಳನ್ನು ಅನುಭವಿಸಬೇಕೆಂಬ ಇಚ್ಛೆಯೇ ಬಂಧವು; ಅದರ ತ್ಯಾಗವೇ ಮೋಕ್ಷವು. ||೧೬||

ಚಿಚ್ಚೈತ್ಯಕಲನಾ ಬಂಧಃ
ತನ್ಮುಕ್ತಿಃ ಮುಕ್ತಿಃ ಉಚ್ಯತೇ ||

ಚಿತ್ ಎಂದರೆ ಸಚ್ಚಿದಾನಂದ ಲಕ್ಷಣಾತ್ಮಕವಾದ ಬ್ರಹ್ಮವು. ಚೈತ್ಯ ಎಂದರೆ ದೇಹಾದಿ ಅನಾತ್ಮ ಪ್ರಪಂಚವು. ಕಲನಾ ಎಂದರೆ ಅವುಗಳ ಬೆರೆಯುವಿಕೆಯು, ಅಂದರೆ ಚಿಜ್ಜಡಗಳಾದ 'ಬ್ರಹ್ಮಚೇತನ' ಮತ್ತು ಅನಾತ್ಮ ವರ್ಗಗಳ ತಾದಾತ್ಮ್ಯವೇ ಬಂಧವು. ॥೧೭॥

**ಅನಾಸ್ಥೈವ ಹಿ ನಿರ್ವಾಣಂ ದುಃಖಮಾಸ್ಥಾಪರಿಗ್ರಹಃ**

ಆಸೆ ಇಲ್ಲದಿರುವಿಕೆಯೇ ಮೋಕ್ಷವು. ಆಸೆಗಳ ಅಂಗೀಕಾರವೇ ದುಃಖವು. ॥೧೮॥

**ಕರ್ಮಣಾ ಬಧ್ಯತೇ ಜಂತುಃ**
**ವಿದ್ಯಯಾ ಚ ವಿಮುಚ್ಯತೇ ।**

ಪಾಪ ಪುಣ್ಯಮಿಶ್ರರೂಪವಾದ ಕರ್ಮದಿಂದ ಜೀವನು ಕಟ್ಟಿಲ್ಪಟ್ಟಿದ್ದಾನೆ. [ಬಂಧಿತನಾಗುತ್ತಾನೆ] ತನ್ನ ನಿಜಸ್ವರೂಪದ ಜ್ಞಾನದಿಂದ ಅಜ್ಞಾನ ಕರ್ಮ ಮತ್ತು ಸಂಶಯಗಳಿಂದ ಬಿಡುಗಡೆ ಹೊಂದುತ್ತಾನೆ. ॥೧೯॥

**ಸ್ವಸ್ವರೂಪಾವಸ್ಥಿತಿಃ ಮುಕ್ತಿಃ**
**ತದ್ಭ್ರಂಶೋಽಹಂ ತ್ವಂ ವೇದನಮ್ ।**

ಸಚ್ಚಿದಾನಂದ ಲಕ್ಷಣಾತ್ಮಕವಾದ ತನ್ನ ಸ್ವರೂಪವನ್ನು ತಿಳಿದು ಅಲ್ಲಿಯೇ ಸ್ಥಿರವಾಗಿ ನಿಲ್ಲುವುದೇ ಮುಕ್ತಿಯು. ಆ ಸ್ವರೂಪ ಸ್ಥಿತಿಯಿಂದ ಭ್ರಷ್ಟತೆಯೇ ಜೀವತ್ವಕ್ಕೆ ಕಾರಣವಾಗಿದೆಯೆಂದು ತಿಳಿಯಬೇಕು. ೨೦॥

**ಚಿತ್ತೇ ಚಲಿತಿ ಸಂಸಾರಃ ನಿಶ್ಚಲೇ ಮೋಕ್ಷ ಉಚ್ಯತೇ ॥**

ಮನಸ್ಸು ಚಂಚಲವಾದರೇ ಸಂಸಾರವು. ಅದು ಸ್ಥಿರವಾದರೇ ಮೋಕ್ಷವೆಂದು ಹೇಳಲ್ಪಡುತ್ತದೆ. ॥೨೦॥

**ಬಂಧೋ ಹಿ ವಾಸನಾಬದ್ಧೋ**
**ಮೋಕ್ಷಃ ಸ್ಯಾದ್ವಾಸನಾಕ್ಷಯಃ ॥**

ಲೋಕವಾಸನೆ, ಶಾಸ್ತ್ರವಾಸನೆ, ದೇಹವಾಸನೆಗಳೆಂಬ ಈ ಮೂರು ವಾಸನೆಗಳಿಂದ ಯುಕ್ತನಾದರೆ ಅದುವೇ ಬಂದವು. ಈ ಮೂರು ವಾಸನೆಗಳನಾಶವೇ ಮೋಕ್ಷವು ॥೨೨॥

**ಪದಾರ್ಥ ಭಾವನಾದಾರ್ಢ್ಯಂ ಬಂಧ ಇತ್ಯಭಿಧೀಯತೇ ॥**

ಪ್ರಪಂಚದಲ್ಲಿರುವ ಪದಾರ್ಥಗಳು ಸತ್ಯವಾಗಿವೆ ಎಂಬ ದೃಢವಾದ ಭಾವನೆಯೇ ಬಂಧವೆಂದು ಹೇಳಲ್ಪಡುತ್ತವೆ. ॥೨೩॥

**ವಾಸನಾತಾನವಂ ಬ್ರಹ್ಮ ಮೋಕ್ಷ ಇತ್ಯಭಿಧೀಯತೇ ॥**

ನಿರಂತರವಾಗಿ ಬ್ರಹ್ಮವೇ ನಾನೆಂಬ ವಾಸನೆಯೂ ಕೂಡ ಕ್ಷಯವಾಗುತ್ತಿರಲು ಮೋಕ್ಷವೆಂದು ಹೇಳಿಸಿ ಕೊಳ್ಳುತ್ತದೆ. ॥೨೪॥

**ನ ಮೋಕ್ಷೋ ನಭಸಃ ಪೃಷ್ಠೇ ನ ಪಾತಾಲೇ ನ ಭೂತಲೇ ।**
**ಸರ್ವಾಶಾಸಂಕ್ಷಯೇ ಚೇತಃ ಕ್ಷಯೋ ಮೋಕ್ಷ**
**ಇತೀಷ್ಯತೇ ॥**

ಮೋಕ್ಷವು ಆಕಾಶದ ಮೇಲಾಗಲಿ ಪಾತಾಳದಲ್ಲಾಗಲಿ. ಭೂಲೋಕದಲ್ಲಾಗಲೀ ಇಲ್ಲ. ಎಲ್ಲ ವಾಸನೆಗಳು ನಾಶವಾಗುತ್ತಿರಲು ಮನಸ್ಸು ನಾಶವಾಗುತ್ತದೆ. ಮನೋನಾಶವೇ ಮೋಕ್ಷವೆಂದು ಹೇಳಲ್ಪಟ್ಟಿದೆ. ॥೨೫॥

ಮೋಕ್ಷೋ ಮೇಽಸ್ತ್ವಿತಿ ಚಿಂತಾಂತರ್ಜಾತಾ ಚೇದುತ್ಥಿತಂ ಮನಃ

ಮನನೋತ್ಥೀ-ಮನಸೇಷ್ಯ ಬಂಧಃ ಸಾಂಸಾರಿಕೊ ಮತಃ ।।

ನನಗೆ ಮೋಕ್ಷವಾಗಲೆಂಬ ಚಿಂತೆಯುಂಟಾದದ್ದಾದರೆ ಅದುವೇ ಮನದ ಉದಯವು ಯಾವುದನ್ನಾದರೂ ಚಿಂತಿಸಿದರೆ ಅದುವೇ ಮನದಲ್ಲಂಟಾದ ಸಂಸಾರ ಸಂಬಂಧಿಯ ಬಂಧವು. ॥೨೬॥

ತದಮಾರ್ಜನ ಮಾತ್ರಂ ಹಿ ಮಹಾಸಂಸಾರತಾಂ ಗತಮ್ ।
ತತ್ಪ್ರಮಾರ್ಜನ ಮಾತ್ರಂ ತು ಮೋಕ್ಷ ಇತ್ಯಭಿಧೀಯತೇ ।।

ಅಜ್ಞಾನ, ಕಾಮ ಸಂಕಲ್ಪಗಳನ್ನು ನಾಶಮಾಡಿಕೊಳ್ಳದಿದ್ದರೆ ಜನನ ಮರಣವೆಂಬ ದೊಡ್ಡ ಸಂಸಾರವನ್ನು ಪಡೆಯುತ್ತಾರೆ. ಅವುಗಳನ್ನು ನಾಶಮಾಡಿಕೊಳ್ಳುವುದೇ ಮೋಕ್ಷವಾಗಿದೆ. ॥೨೭॥

೩೧ ವಾಕ್ಯಗಳು ಬಂಧಮೋಕ್ಷಗಳ ಸ್ವರೂಪವನ್ನು ಹೇಳಿದವು.

## ಎರಡನೇ ಪ್ರಕರಣವು ಮುಗಿದುದು

## ಅಜ್ಞಾನಿಗಳನ್ನು ನಿಂದಿಸುವ ವಾಕ್ಯಗಳು

**ಅಥ ಯೋಽನ್ಯಾಂ ದೇವತಾಮುಪಾಸ್ತೇಽ-ನ್ಯೋಽಸಾವ ನ್ಯೋಽಹಮಸ್ಮೀತಿ ।**
**ನ ಸ ವೇದ ಯಥಾ ಪಶುರೇವ ಸ ದೇವಾನಾಮ್ ॥ ॥೧॥**

ಯಾವನು ದೇವನು ನನಗಿಂತಲೂ ಬೇರೆಯೆಂದು ಅವನು ಪೂಜ್ಯನೂ, ನಾನು ದೇವರಿಗಿಂತ ಬೇರೆಯವನು ಪೂಜಕನಾಗಿದ್ದೇ ನೆಂದು ತಿಳಿದು ಯಾವನು ಈ ರೀತಿಯಾದ ಭೇದ ಬುದ್ಧಿಯಿಂದ ದೇವತೆಗಳನ್ನು ಉಪಾಸನೆ ಮಾಡುತ್ತಾನೆಯೋ ಅವನು ತಿಳಿದವನಲ್ಲ. ಅಜ್ಞವಾದ ಪಶುವು ಹೇಗೆ ಉದರ ಪೋಷಣೆಗೋಸ್ಕರ ಯಜಮಾನ ನನ್ನು ಸೇವಿಸುತ್ತದೆಯೋ, ಅದರಂತೆ ಇವನು ಮೂರ್ಖನ ಹಾಗೆ ದೇವರನ್ನು ಪೂಜಿಸುತ್ತಾನೆ.

**ಅತ್ರ ಭಿದಾಮಿವ ಮನ್ಯಮಾನಃ ಶತಧಾ ಸಹಸ್ರಧಾ ಭಿನ್ನೋ ಮರ್ತ್ಯಃ ಸ ಮೃತ್ಯು ಮಾಪ್ನೋತಿ ॥೨॥**

ಯಾವನು ಅದ್ವಿತಿಯವಾದ ಬ್ರಹ್ಮದಲ್ಲಿ ಭೇದವಂತ ಕಾಣುತ್ತಾನೆ ಯೋ, ಅವನು ನೂರು ಸಾವಿರ ಭೇದವುಳ್ಳವನಾಗಿ ಕಾಲನಿಂದ ಮೃತ್ಯು ವನ್ನು ಹೊಂದುತ್ತಾನೆ.

**ಕರ್ತೃತ್ವಾದ್ಯಹಂಕಾರ ಭಾವನಾರೂಢೋ ಮೂಢಃ ॥೩॥**

ನಾನೇ ಪುಣ್ಯಕರ್ಮಗಳನ್ನು ಮಾಡುವೆನು ಆದರ ಫಲಗಳನ್ನು ಅನುಭವಿಸುವವನೆಂಬ ಅಹಂ ಭಾವನೆಯುಳ್ಳವನು ಮೂಢನು.

**ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ॥**

ಯಾವನು ಬ್ರಹ್ಮದಲ್ಲಿ ಭೇದವನ್ನು ಕಾಣುತ್ತಾನೆಯೋ ಅವನು ಮೃತ್ಯುವಿನಿಂದ ಪುನಃ ಪುನಃ ಹುಟ್ಟು ಸಾವುಗಳನ್ನು ಪಡೆಯುತ್ತಾನೆ ||೪||

**ಅನುಭೂತಿಂ ವಿನಾ ಮೂಢೋ ವೃಥಾ ಬ್ರಹ್ಮಣಿ ಮೋದತೇ ।**
**ಪ್ರತಿಬಿಂಬಿತ ಶಾಖಾಗ್ರ ಫಲಾಸ್ವಾದನ ಮೋದವತ್ ॥**

ಪ್ರತಿಬಿಂಬಿತವಾದ ಶಾಖೆಯ ತುದಿಯಲ್ಲಿರುವ ಹಣ್ಣನ್ನು ತಿಂದು ಸಂತೋಷ ಪಟ್ಟವನಂತೆ, ಮೂರ್ಖನು ಬ್ರಹ್ಮವೇ ತಾನೆಂಬ ಸ್ವಾನುಭವವಿಲ್ಲದೆ ಬ್ರಹ್ಮದ ವಿಷಯದಲ್ಲಿ ವ್ಯರ್ಥವಾಗಿ ಸಂತೋಷ ಪಡುತ್ತಾನೆ. ||೫||

**ಅಷ್ಟಾಂಗಂ ಚ ಚತುಷ್ಪಾದಂ ತ್ರಿಸ್ಥಾನಂ ಪಂಚದೈವತಮ್ ।**
**ಓಂಕಾರಂ ಯೋ ನ ಜಾನಾತಿ ಬ್ರಾಹ್ಮಣೋ ನ ಭವೇತ್ತು ಸಃ ॥**

ಅಕಾರ, ಉಕಾರ, ಮಕಾರ, ಅರ್ಧ ಮಾತ್ರೆಗಳೆಂಬ ನಾಲ್ಕು ಪಾದಗಳಿಂದ ಕೂಡಿದ, ಜಾಗ್ರತ್, ಸ್ವಪ್ನ ಸುಷುಪ್ತಿಗಳೆಂಬ ಮೂರು ಸ್ಥಾನವುಳ್ಳ ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರೆಂಬ

ಪಂಚದೇವತಾ ಸ್ವರೂಪವಾದ ಓಂಕಾರದ ಸ್ವರೂಪವನ್ನು ಯಾವನು
ತಿಳಿದಿಲ್ಲವೋ ಅವನು ಬ್ರಾಹ್ಮಣನಲ್ಲವು. ||೬||

**ಅತಿ ವರ್ಣಾಶ್ರಮಂ ರೂಪಂ ಸಚ್ಚಿದಾನಂದ ಲಕ್ಷಣಮ್ ।**
**ಯೋ ನ ಜಾನಾತಿ ಸೋಽವಿದ್ವಾನ್ ಕದಾ ಮುಕ್ತೋ ಭವಿಷ್ಯತಿ ॥**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರುಗಳೆಂಬ ನಾಲ್ಕು ವರ್ಣಗಳನ್ನು ಬ್ರಹ್ಮಚರ್ಯ, ಗ್ರಹಸ್ಥ, ವಾನಪ್ರಸ್ಥ, ಸಂನ್ಯಾಸ ವೆಂಬ ನಾಲ್ಕು ಆಶ್ರಮಗಳನ್ನೂ ಮತ್ತು ವರ್ಣಾಶ್ರಮ ಧರ್ಮಗಳನ್ನು ಅತಿಕ್ರಮಿಸಿದ ಅಂದರೆ [ಅವುಗಳಿಂದ ರಹಿತವಾದ] ಸದ್ರೂಪ, ಚಿದ್ರೂಪ ಆನಂದರೂಪವೆಂಬ ಸ್ವರೂಪ ಲಕ್ಷಣದಿಂದ ಲಕ್ಷಿತವಾದ ಈ ಬ್ರಹ್ಮವನ್ನು ಯಾವನು ತಿಳಿಯುವುದಿಲ್ಲವೋ ಅವನು ಅವಿದ್ವಾಂಸನು. [ಅಜ್ಞಾನಿಯು] ಅವನು ಯಾವಾಗ ಮುಕ್ತನಾಗುತ್ತಾನೆ ? ||೭||

**ಕುಶಲಾ ಬ್ರಹ್ಮವಾರ್ತಾಯಾಂ ವೃತ್ತಿಹೀನಾಃ ಸುರಾಗಿಣಃ ।**
**ತೇಽಪ್ಯಜ್ಞಾನತಯಾ ನೂನಂ ಪುನರಾಯಾಂತಿ ಯಾಂತಿ ಚ ॥**

ಯಾರು ವಿಷಯಾಸಕ್ತರಾಗಿ ನೀತಿ ರಹಿತರಾಗಿದ್ದಾರೆಯೋ, ಬ್ರಹ್ಮದ ವಿಷಯಕವಾಗಿ ವ್ಯಾಖ್ಯಾನ ಮಾಡುವುದರಲ್ಲಿ ವಾಗ್ಮಿಗಳಾ

ಗಿದ್ದಾರೆಯೋ, ಅವರೂ ಕೂಡ ಅಜ್ಞಾನದಿಂದ ಖಂಡಿತವಾಗಿಯೂ ಜನನ ಮರಣಗಳನ್ನು ಪಡೆಯುತ್ತಾರೆ. ॥೮॥

**ಕಾಷ್ಠದಂಡೋ ಧೃತೋ ಯೇನ ಸರ್ವಾಶೀ ಜ್ಞಾನವರ್ಜಿತಃ ।**
**ಸ್ವಾಯತ್ತಮೇಕಾಂತಹಿತಂ ಸ್ವೇಪ್ಸಿತತ್ಯಾಗವೇದನಮ್ ।**
**ಯಸ್ಯ ದುಷ್ಕರತಾಂ ಯಾತಂ ಧಿಕ್ತಂ ಪುರುಷ ಕೀಟಕಮ್ ॥**

ಎಲ್ಲ ವಿಷಯದ ಆಸೆಯುಳ್ಳ ಸ್ವಸ್ವರೂಪ ಜ್ಞಾನ ರಹಿತನಾದ ಯಾವಪುರುಷನು ಸನ್ಯಾಸ ಚಿಹ್ನೆಯಾದ ದಂಡವನ್ನು ಧರಿಸುತ್ತಾನೋ, ಅವನು ತನಗೆ ಏಕಾಂತವಾಸ ಮಾಡಲು ಶಕ್ಯವಾದರೂ ತನಗೆ ಇಷ್ಟವಾದದ್ದನ್ನು ತ್ಯಾಗಮಾಡಬೇಕೆಂದು ತಿಳಿದಿದ್ದರೂ ಯಾವನಿಗೆ ಅದು ಸಾಧ್ಯವಾಗುವುದಿಲ್ಲವೋ, ಅಂತಹ ಮಾನವ ಕೀಟನಿಗೆ ಧಿಕ್ಕಾರ ವಿರಲಿ. ॥೯॥

**ಅದ್ವಿತೀಯಬ್ರಹ್ಮತತ್ತ್ವಂ ನ ಜಾನಂತಿ ಯದಾ**
**ತದಾ । ಭ್ರಾಂತಾ ಏವಾಖಿಲಾಸ್ತೇಷಾಂ ಕ್ವ ಮುಕ್ತಿಃ**
**ಕ್ವೇಹ ವಾ ಸುಖಮ್ ॥**

ಯಾರು ಯಾವಾಗ ಸ್ವಗತಾದಿ ಭೇದರಹಿತವಾದ [ತನಗಿಂತಲೂ ಬೇರೆ ಯಲ್ಲದ] ಬ್ರಹ್ಮತತ್ತ್ವವನ್ನು ತಿಳಿಯುವುದಿಲ್ಲವೋ, ಆಗ ಅವರೆಲ್ಲರೂ ಭ್ರಾಂತರೇ, ಅವರಿಗೆ ಮೋಕ್ಷವೆಲ್ಲಿಯದು? ಸುಖವೆಲ್ಲಿಯದು ?॥೧೦॥

**ಅಜ್ಞಾನೋಪಹತೋ ಬಾಲ್ಯೇ ಯೌವನೇ ವನಿತಾಹತಃ ।**

**ಶೇಷೇ ಕಲತ್ರಚಿಂತಾರ್ತಃ ಕಿಂ ಕರೋತಿ ನರಾಧಮಃ॥ ॥೧೧॥**

ಬಾಲ್ಯದಲ್ಲಿ ಏನೂ ತಿಳುವಳಿಕೆ ಇಲ್ಲದಿರುವುದರಿಂದ ಹತನಾದನು [ಕೊಲ್ಲಲ್ಪಟ್ಟಿರುವ] ಪ್ರಾಯದಲ್ಲಿ [ಯೌವನದಲ್ಲಿ] ಸ್ತ್ರೀಲೋಲುಪತೆಯಿಂದ ಹತನಾದವನು. ವೃದ್ಧಾವಸ್ಥೆಯಲ್ಲಿ ತನ್ನ ಪತ್ನಿಯ ವಿಷಯವಾಗಿ ಚಿಂತೆಯಿಂದ ದುಃಖಿಗೊಂಡ ಈ ಹೀನನಾದ ಮನುಷ್ಯನು ಏನು ಮಾಡ್ಯಾನು ? ಯಾವ ಪುರುಷಾರ್ಥವನ್ನೂ ಸಾಧಿಸಲಾರನೆಂಬ ಭಾವವು.

**ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಜಂತವಃ**
**ಧರಾವಿವರಮಗ್ನಾನಾಂ ಕೀಟಾನಾಂ ಸಮತಾಂ ಗತಾಃ॥೧೨॥**

ರಾಗದ್ವೇಷಗಳಿಂದ ಉಂಟಾದ ಸುಖ-ದುಃಖ ಶೀತ-ಉಷ್ಣ, ಹಸಿವು-ತೃಷೆ, ಲಾಭ-ಹಾನಿ, ಇವೇ ಮೊದಲಾದ ಜೋಡಿಗಳಿಂದ ಮೋಹಗೊಂಡಿರುವುದರಿಂದ ಮನುಷ್ಯರು ಭೂಮಿಯ ಬಿಲದಲ್ಲಿ ಅಡಗಿ ಕೊಂಡಿರುವ ಕೀಟಗಳಿಗೆ ಸಮಾನರಾಗಿದ್ದಾರೆ. [ ಅಂದರೆ ಕೀಟಮಾತ್ರವು ಪುರುಷಾರ್ಥವನ್ನು ಸಾಧಿಸಲಾರವು. ] ಕೇವಲ ನಿದ್ರೆ. ಆಹಾರ. ಭಯ. ಮೈಥುನಾದಿಗಳನ್ನು ಹೊಂದುವಂತೆ ಈ ಮನುಷ್ಯರು ಕೂಡಾ ಪುರುಷಾರ್ಥ ಭ್ರಷ್ಟರಾಗಿ ಕೀಟ ಸಮಾನವಾಗಿದ್ದಾರೆಂಬ ಭಾವವು. [ ತಾತ್ಪರ್ಯವು. ]

[ಇತಿ ಸಾರ್ಧಾಂತಿಕಾವಿದ್ವನ್ನಿಂದಾವಾಕ್ಯಾನಿ] ॥

**ಮೂರನೆ ಪ್ರಕರಣ ಮುಗಿದುದು**

ಆತ್ಮಾ ವಾ ಇದಮೇಕ ಏವಾಗ್ರ ಆಸೀತ್
ನಾನ್ಯತ್ಕಿಂಚನ ಮಿಷತ್ ॥೧॥

ಈ ನಾಮ ರೂಪಾತ್ಮಕವಾದ ಜಗತ್ತು ಸಂಸಾರ ಧರ್ಮ ರಹಿತವಾದ ಸಚ್ಚಿದಾನಂದ ಲಕ್ಷಣಾತ್ಮಕವಾದ ಬ್ರಹ್ಮವೇ ಆಗಿತ್ತು. ಆತ್ಮನಿಗಿಂತ ಬೇರೆಯಾದ ಕ್ರಿಯೆಯುಳ್ಳದ್ದು ಯಾವುದೂ ಇರಲಿಲ್ಲ.

ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ
ಮೃಣ್ಮಯಂ ವಿಜ್ಞಾತಂ ಸ್ಯಾದ್ವಾಚಾರಂಭಣಂ ವಿಕಾರೋ
ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್ ೨॥

ಎಲೈ! ವಿನೀತನಾದ ಶಿಷ್ಯನೇ! ಕೇಳು ಹೇಗೆ ಒಂದು ಮಣ್ಣಿನ ಮುದ್ದೆಯನ್ನು ತಿಳಿಯುವುದರಿಂದ ಮಣ್ಣಿನಿಂದ ಹುಟ್ಟಿರುವ (ಉತ್ಪನ್ನವಾದ) ಮಡಕೆ, ಮುಚ್ಚಳ, ಹರವಿ, ಪರಿವಾಣ, ಹೂಜಿ ಮೊದಲಾದವುಗಳನ್ನು ಮಣ್ಣಿಂದೇ ತಿಳಿದಂತೆ ಆಗುತ್ತದೆಯೋ, ಇಲ್ಲಿ ಘಟ ಮೊದಲಾದ ವಿಕಾರವೆಂಬುವದು ಮಾತಿನಿಂದ ಪ್ರಾರಂಭ ವಾದದ್ದು ಅಂದರೆ ಇರುವ ವಸ್ತು ಮಣ್ಣು ಅದನ್ನೇ ಮಡಕೆ ಎನ್ನುತ್ತಾರೆ. ಮಡಕೆ ಎನ್ನುವುದು ಸುಳ್ಳು ಮಣ್ಣು ಸತ್ಯವು. ಇದ ರಂತೆ ಜಗದ್ರೂಪವಾದ ಬ್ರಹ್ಮವು ಸತ್ಯವು. ನಾಮರೂಪಾತ್ಮಕ ವಾದ ಜಗತ್ತು ಮಿಥ್ಯವು.

ಅತೋಽನ್ಯದಾರ್ತಂ ನ ತು ತದ್ವಿತೀಯಮಸ್ತಿ ।
ಬ್ರಹ್ಮಕ್ಕಿಂತಲೂ ಬೇರೆ ಯಾದದ್ದು ದುಃಖರೂಪವಾಗಿದೆ ಅದಕ್ಕಿಂತ ಬೇರೆಯಾವುದು ಇರುವುದಿಲ್ಲ. ॥೩॥

ನಾತ್ರ ಕಾಂಚನ ಭಿದಾಸ್ತಿ ॥

ಈ ಚೈತನ್ಯ ಸ್ವರೂಪವಾದ ಬ್ರಹ್ಮದಲ್ಲಿ ಸ್ವಲ್ಪವೂ ಕೂಡ ಭೇದವೇರ್ಪಡುವುದಿಲ್ಲ. ॥೪॥

ನೈವ ತತ್ರ ಕಾಂಚನ ಭಿದಾಸ್ತಿ ॥

ನಿತ್ಯ, ಶುದ್ಧ, ಬುದ್ಧ ಸ್ವರೂಪವಾದ ಬ್ರಹ್ಮದಲ್ಲಿ ಯಾವ ಭೇದಕ್ಕೂ ಸ್ವಲ್ಪವೂ ಅವಕಾಶವಿಲ್ಲ. ॥೫॥

ಸರ್ವಂ ವಿಕಾರಜಾತಂ ಮಾಯಾಮಾತ್ರಮ್ ॥

ಸಕಲನಾಮರೂಪಾತ್ಮಕವಾದ ಕಾರ್ಯ ಪ್ರಪಂಚವು ಮಾಯಾ ಕಾರ್ಯವಾದ್ದರಿಂದ ಮಾಯಿಕವಾಗಿದೆ. [ಅಂದರೆ ಮಿಥ್ಯೆಯಾಗಿದೆಯೆಂಬ ಭಾವವು.] ॥೬॥

ಸರ್ವತ್ರ ನಹ್ಯಸ್ತಿ ದ್ವೈತಸಿದ್ಧಿಃ ॥

ವಿಚಾರ ಮಾಡಿ ನೋಡಿದ್ದಾದರೇ ಎಲ್ಲಿಯೂ ಕೂಡ ದ್ವೈತದ ಇರುವಿಕೆಗೆ ಅವಕಾಶವಿಲ್ಲ. ॥೭॥

ನಾಸ್ತಿ ದ್ವೈತಂ ಕುತೋ ಮರ್ತ್ಯಮ್ ॥

ಬ್ರಹ್ಮಸ್ವರೂಪನಾದ ತನಗಿಂತಲೂ ಬೇರೆಯಾದದ್ದು ಯಾವುದೂ ಇಲ್ಲವೆಂದು ತಿಳಿದವನಿಗೆ ಮರಣವೆಲ್ಲಿಯದು? ॥ ೮ ॥

**ಮಾಯಾಮಾತ್ರಮಿದಂ ದ್ವೈತಂ ಅದ್ವೈತಂ ಪರಮಾರ್ಥತಃ ।**
**ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ ॥**

ನಾಮರೂಪಾತ್ಮಕವಾದ ಪ್ರಪಂಚವು ಒಂದು ವೇಳೆ ಇದ್ದದ್ದಾದರೆ ನಿವೃತ್ತಿಯಾದೀತು ! ಈ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. ಈ ದೃಶ್ಯವಾದ ನಾಮರೂಪಾತ್ಮಕವಾದ ದ್ವೈತ ಪ್ರಪಂಚವು ಹಗ್ಗದಲ್ಲಿ ತೋರುವ ಹಾವಿನಂತೆ ಮಾಯಾ ಕಾರ್ಯವಾಗಿದೆ. ಆದ್ದರಿಂದ ಈ ಪ್ರಪಂಚವು ಮೂರು ಕಾಲದಲ್ಲಿಯೂ ಇಲ್ಲ. ಅದ್ವೈತಸ್ವರೂಪವಾದ ಬ್ರಹ್ಮವೊಂದೇ ಸತ್ಯವಾದದ್ದು. ॥ ೯ ॥

**ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್ ।**
**ಉಪದೇಶಾದಯಂ ವಾದೋ ಜ್ಞಾತೇ ದ್ವೈತಂ ನ ವಿದ್ಯತೇ ॥** ॥೯॥

ಒಂದು ವೇಳೆ ಯಾವನಾದರೊಬ್ಬನಿಂದ ಕಲ್ಪಿಸಲ್ಪಟ್ಟಿದ್ದರೆ ಆ ವಿಕಲ್ಪವು ವಿಚಾರದಿಂದ ದೂರವಾದೀತು! ಗುರೂಪದೇಶದಿಂದ ನಿಜವಾದ ತತ್ತ್ವವನ್ನು ತಿಳಿದುಕೊಳ್ಳುತ್ತಿರಲು ಭೇದವು ಇರುವುದಿಲ್ಲ. ॥ ೧೦ ॥

**ದ್ವಿತೀಯಕಾರಣಾಭಾವಾದನು. ತ್ಪನ್ನಮಿದಂ ಜಗತ್ ಯಥೈ**

ವೇದಂ ನಭಃಶೂನ್ಯಂ ಜಗಚ್ಛೂನ್ಯಂ ತಥೈವ ಹಿ ||

ಜನರು ಈ ಜಗತ್ತು ಹುಟ್ಟಿದೆ ಎಂದು ತಿಳಿದುಕೊಂಡಿದ್ದಾರೆ. ಅದು ಹುಟ್ಟಿಯೇ ಇಲ್ಲ. ಏಕೆಂದರೆ ಕಾರಣವಿಲ್ಲದೆ ಕಾರ್ಯವಾಗುವುದಿಲ್ಲವಷ್ಟೇ? ಬ್ರಹ್ಮವಾಗಲಿ ಮಾಯೆಯಾಗಲಿ ಈ ಜಗತ್ತಿಗೆ ಕಾರಣವಲ್ಲ. ಬ್ರಹ್ಮವು ಚಿದ್ರೂಪವಾದ್ದರಿಂದ ವಿಕಾರವಾಗುವುದಿಲ್ಲ. ಆದ್ದರಿಂದ ಈ ಜಗತ್ತು ಬ್ರಹ್ಮದ ಕಾರ್ಯವಾಗುವುದಿಲ್ಲ. ಮಾಯೆಯೆಂದರೆ ಇಲ್ಲದ್ದು ಎಂದು ಶಂಕರಾಚಾರ್ಯರು ಹೇಳಿದ್ದಾರೆ. ಇಲ್ಲದ್ದಾದ ಮಾಯೆಯಿಂದಲೂ ಜಗತ್ತು ಹುಟ್ಟಿಲ್ಲ. ಅದು ಹೇಗೆಂದರೆ ಆಕಾಶವು ಹೇಗೆ ಶೂನ್ಯವಾಗಿದೆಯೋ ಅದರಂತೆ ಜಗತ್ತೂ ಶೂನ್ಯವಾದದ್ದಾಗಿದೆ. ||೧೧||

ಇದಂ ಪ್ರಪಂಚಂ ಯತ್ಕಿಂಚಿದ್ಯದ್ಯಜ್ಜಗತಿ ವೀಕ್ಷ್ಯತೇ ||
ದೃಶ್ಯರೂಪಂ ಚ ದೃಗ್ರೂಪಂ ಸರ್ವಂ ಶಶವಿಷಾಣವತ್ ||

ಈ ಜಗತ್ತಿನಲ್ಲಿ ಯಾವ ಯಾವ ಪದಾರ್ಥಗಳು ಇವೆಯೋ [ಅವುಗಳನ್ನು ನಾವು ನೋಡುತ್ತೇವೆಯೋ] ನೋಡಿಸಿಕೊಳ್ಳುವ ಮತ್ತು ನೋಡುವ ಸರ್ವಜಗತ್ತು ಮೊಲದ ಕೋಡಿನಂತೆ ಮಿಥ್ಯೆಯಾಗಿದೆ. ||೧೨||

ಇದಂ ಪ್ರಪಂಚಂ ನಾಸ್ತ್ಯೇವ ನೋತ್ಪನ್ನಂ ನೋಸ್ಥಿತಂ ಜಗತ್ ।
ಚಿತ್ತಂ ಪ್ರಪಂಚಮಿತ್ಯಾಹುರ್ನಾಸ್ತಿ ನಾಸ್ತ್ಯೇವ ಸರ್ವದಾ

ಯಾವುದೇ ಒಂದು ವಸ್ತು ಉತ್ಪತ್ತಿ, ಸ್ಥಿತಿ ಉಳ್ಳದ್ದಾದರೆ,

ಅದನ್ನು ಇದೆ ಎಂದು ಹೇಳಲು ಬರುತ್ತದೆ. ಆದರೆ ಈ ಪ್ರಪಂಚವು [ಜಗತ್ತು] ಉತ್ಪತ್ತಿ ಸ್ಥಿತಿ ರಹಿತವಾಗಿದೆ. ಆದ್ದರಿಂದ ಈ ಪ್ರಪಂಚವು ಭೂತಾದಿ ಮೂರು ಕಾಲಗಳಲ್ಲಿಯೂ ಇಲ್ಲವೇ ಇಲ್ಲ, ಕೆಲವರು ಪ್ರಪಂಚವು ಭಾವನಾತ್ಮಕವಾದದ್ದೆಂದು ಹೇಳುತ್ತಾರೆ. ಶ್ರುತಿ, ಯುಕ್ತಿ ಸ್ವಾನುಭವಗಳಿಂದ ನೋಡಿದರೆ ಅದು ಯಾವಾಗಲೂ ಇಲ್ಲವೇ ಇಲ್ಲ. ॥೧೩॥

**ಮಾಯಾಕಾರ್ಯಾದಿಕಂ ನಾಸ್ತಿ ಮಾಯಾ ನಾಸ್ತಿ ಭಯಂ**
**ನ ಹಿ । ಪರಂ ಬ್ರಹ್ಮಾಹ ಮಸ್ಮೀತಿ ಸ್ಮರಣಸ್ಯ ಮನೋ ನಹಿ॥**

ಈ ದೃಶ್ಯವಾದ ಪ್ರಪಂಚವು ಮಾಯೆಯ ಕಾರ್ಯವಲ್ಲ, ಮಾಯೆಗೂ ಪ್ರಪಂಚಕ್ಕೂ ಕಾರ್ಯ ಕಾರಣ ಭಾವವು ಘಟಿಸುವುದಿಲ್ಲ, ಏಕೆಂದರೆ ಮಾಯೆಯು ಇಲ್ಲ. ಇಲ್ಲದ್ದಕ್ಕೇನೆ ಮಾಯೆ ಎನ್ನುತ್ತಾರೆ ಆದ್ದರಿಂದ ಪ್ರಪಂಚವು ಮಾಯಾ ಕಾರ್ಯವಲ್ಲ. ಕಾರಣವಾದ ಮಾಯೆ ಕಾರ್ಯವೆಂಬ ಪ್ರಪಂಚವಿಲ್ಲದ್ದರಿಂದ ಭಯವಿಲ್ಲ, ನಾನು ಪರಬ್ರಹ್ಮವಿದ್ದೇನೆಂದು ಜ್ಞಾಪಿಸಿಕೊಳ್ಳುವುದಕ್ಕೆ ನನ್ನ ಸ್ವರೂಪದಲ್ಲಿ ಮನಸ್ಸೂ ಕೂಡ ಇಲ್ಲ. ॥೧೪॥

**ಬಳಿಕ ಜಗತ್ತು ಇಲ್ಲವೆಂಬುವದಕ್ಕೆ ಅನೇಕ ಅಸಂಭವ ಉದಾಹರಣೆಗಳನ್ನು ಹೇಳುತ್ತಾರೆ.**

**ವಂಧ್ಯಾಕುಮಾರ ವಚನೇ ಭೀತಿಶ್ಚೇತ್**
**ಅಸ್ತ್ಯಿದಂ ಜಗತ್ ।**

ಬಂಜೆಯ ಮಗನ ಮಾತಿನಲ್ಲಿ ಹೆದರಿಕೆಯಿರುವುದಾದರೆ ಬ್ರಹ್ಮದಲ್ಲಿ ಜಗತ್ತಿದೆಯೆಂದು ಹೇಳಬೇಕಾಗುತ್ತದೆ. ಅಂದರೆ ಬಂಜೆಯ ಮಗನ ಮಾತಿನಲ್ಲಿ ಯಾರಿಗೂ ಯಾವಾಗಲೂ ಭಯವಿಲ್ಲವೋ, ಅದರಂತೆ ಬ್ರಹ್ಮದಲ್ಲಿ ಯಾವಾಗಲೂ ಜಗತ್ತಿಲ್ಲವೆಂದು ತಾತ್ಪರ್ಯವು.॥೧॥

ಶಶಶೃಂಗೇಣ ನಾಗೇಂದ್ರೋ ಮೃತ ಶ್ಚೇತ್
ಜಗದಸ್ತಿ ಸತ್

ಮದವೇರಿದ ಶ್ರೇಷ್ಠವಾದ ಆನೆಯು ಮೊಲದ ಕೋಡಿನಿಂದ ಸತ್ತದ್ದಾದರೆ ಈ ಜಗತ್ತು ಸತ್ಯವಾದೀತು !! ಇಲ್ಲದ ಮೊಲದ ಕೋಡಿನಿಂದ ಆನೆಯು ಹೇಗೆ ಸಾಯುವುದಿಲ್ಲವೊ, ಅದರಂತೆ ಜಗತ್ತು ಸತ್ಯವಾದದ್ದಲ್ಲವು. ॥೨॥

ಮೃಗತೃಷ್ಣಾ ಜಲಂ ಪೀತ್ವಾ ತೃಪ್ತಶ್ಚೇತ್
ಅಸ್ತ್ವಿದಂ ಜಗತ್

ಯಾವನಾದರೊಬ್ಬನು ಮೃಗಜಲವನ್ನು ಕುಡಿದು ತೃಪ್ತನಾದದ್ದು ನಿಜವಾದರೇ, ಈ ಜಗತ್ತು ಸತ್ಯವಾಗಿ ಇದೆಯೆಂದು ಹೇಳಿಸಿಕೊಂಡೀತು. ಅಂದರೆ ಮರೀಚಿಕೆಯ ನೀರನ್ನು ಕುಡಿದು ತೃಪ್ತಿ ಹೊಂದುವುದು ಹೇಗೆ ಅಸಂಭವವೋ, ಅದರಂತೆ ಜಗತ್ತು ಸತ್ಯವೆಂದು ಹೇಳುವವನ ಮಾತೂ ಅಸಂಭವವು. ॥೩॥

ಗಂಧರ್ವನಗರೇ ಸತ್ಯೇ ಜಗದ್ಭವತಿ ಸರ್ವದಾ

ಮಳೆಗಾಲದಲ್ಲಿ ಮೋಡವು ಗಂಧರ್ವರ ಪಟ್ಟಣದಂತೆ ತೋರು ತ್ತದೆ. ಅದಕ್ಕೆ ಗಂಧರ್ವನಗರವೆಂದು ಹೆಸರು. ಅದು ನಿಜವಾದರೆ ಜಗತ್ತು ಯಾವಾಗಲೂ ಇರುತ್ತದೆ. ಮೇಘವು ಗಂಧರ್ವರ ನಗರದ ಆಕೃತಿಯಾಗಿ ತೋರುವುದು ಹೇಗೆ ಮಿಥ್ಯವೋ ಅದರಂತೆ ಈ ತೋರುವ ಜಗತ್ತೂ ಕೂಡ ಮಿಥ್ಯೆಯು. ||೪||

**ಗಗನೇ ನೀಲಿಮಾಸತ್ಯೇಜಗತ್ಸತ್ಯಂ ಭವಿಷ್ಯತಿ**

ಆಕಾಶದಲ್ಲಿ ಕಪ್ಪು ಬಣ್ಣ ಇರುವುದು ಸತ್ಯವಾದದ್ದಾದರೆ, ಜಗತ್ತು ಸತ್ಯವಾಗುತ್ತದೆ. ಬಾಲ ಬುದ್ಧಿಯುಳ್ಳವರಿಗೆ ಆಕಾಶವು ಕಪ್ಪು ಬಣ್ಣ ದ್ದೆಂದು ಕಂಡರೂ ಶಾಸ್ತ್ರವನ್ನು ತಿಳಿದ ಬುದ್ಧಿವಂತರು ಅದು ಭ್ರಾಂತಿ ಯೆಂದು ಹೇಳುತ್ತಾರೆ. ಅದರಂತೆ ಅಜ್ಞಾನಿಗಳು ಜಗತ್ತು ಸತ್ಯವೆಂದು ಹೇಳುತ್ತಾರೆ. ಜ್ಞಾನಿಗಳು ಜಗತ್ಸತ್ಯವೆನ್ನುವುದು ಭ್ರಾಂತಿಯೆನ್ನು ತ್ತಾರೆ. ||೫||

**ಮಾಸಾತ್ಪೂರ್ವಂ ಮೃತೋ ಮರ್ತ್ಯೋ**
**ಹ್ಯಾಗತಶ್ಚೇತ್ ಜಗದ್ಭವೇತ್**

ಒಂದು ತಿಂಗಳ ಹಿಂದೆ ಸತ್ತ ಮನುಷ್ಯನು ಮರಳಿ ಮನೆಗೆ ಬಂದ ದ್ದಾದರೆ, ಜಗತ್ತು ಇದ್ದೀತು! ಆದರೆ ಒಂದು ತಿಂಗಳ ಹಿಂದೆ ಸತ್ತ ಮನುಷ್ಯನು ತಿರುಗಿ ಬರುವುದು ಹೇಗೆ ಅಸಂಭವವೋ, ಅದರಂತೆ ಜಗತ್ತು ಸತ್ಯವಾಗಿದೆ ಎಂದು ಹೇಳುವವನ ಮಾತೂ ಅಸಂಭವವು.||೬||

ಗೋಸ್ತನಾದುದ್ಭವಾತ್ ಕ್ಷೀರಂಪುನರಾರೋಪಣೇ ಜಗತ್

ಹಸುವಿನ ಮೊಲೆಯಿಂದ ಹೊರ ಬಂದ ಹಾಲು ತಿರುಗಿ ಮೊಲೆಯನ್ನು ಸೇರುವುದು ಸತ್ಯವಾದರೆ, ಜಗತ್ತು ಸತ್ಯವಾದೀತು ! ||೭||

ಜ್ವಾಲಾಗ್ನಿಮಂಡಲೇ ಪದ್ಮವೃದ್ಧಿಶ್ಚೇತ್

ಅಸ್ತ್ವಿದಂ ಜಗತ್

ಚೆನ್ನಾಗಿ ಜ್ವಾಲೆಗಳಿಂದ ಉರಿಯುತ್ತಿರುವ ಬೆಂಕಿಯ ಮಧ್ಯದಲ್ಲಿ ಕಮಲವು ಹುಟ್ಟಿ ಬೆಳೆಯುವುದಾದರೆ, ಈ ಜಗತ್ತು ಇದೆಯೆಂದು ಹೇಳಬೇಕಾಗುತ್ತದೆ. ಅಗ್ನಿಯ ಮಧ್ಯದಲ್ಲಿ ಕಮಲವು ಬೆಳೆಯುವುದು ಹೇಗೆ ಅಸಂಭವವೋ, ಅದರಂತೆ ಬ್ರಹ್ಮಕ್ಕಿಂತಲೂ ಜಗತ್ತು ಬೇರೆಯಾಗಿದೆ ಎಂಬುವನ ಮಾತೂ ಅಸಂಭವವು. ||೮||

ಜ್ಞಾನಿನೋ ಹೃದಯಂ ಮೂಢೈಃ ಜ್ಞಾತಂ

ಚೇತ್ ಅಸ್ತ್ವಿದಂ ಜಗತ್

ಮೂಢರಿಂದ ಜ್ಞಾನಿಗಳ ಹೃದಯವು ತಿಳಿಯಲ್ಪಟ್ಟರೆ ಈ ಜಗತ್ತು ಇರಲಿ. ಆ ಮೂಢರು ಜ್ಞಾನಿಗಳ ಹೃದಯವನ್ನು ಎಂದೂ ಹೇಗೆ ತಿಳಿಯಲಾರರೋ, ಅದರಂತೆ ಜಗತ್ತು ಎಂದೂ ಎಲ್ಲಿಯೂ ಇಲ್ಲ. ||೯||

ಅಜಕುಕ್ಷೌ ಜಗನ್ನಾಸ್ತಿ ಹ್ಯಾತ್ಮಕುಕ್ಷೌ ಜಗನ್ನಹಿ ।

ಸರ್ವದಾಽಭೇದ ಕಲನೇ ದ್ವೈತಾದ್ವೈತಂ ನ ವಿದ್ಯತೇ ॥

ಜಗತ್ತು ಬ್ರಹ್ಮನ ಹೊಟ್ಟೆಯಲ್ಲಾಗಲಿ, ಮಾನವನ ಹೊಟ್ಟೆಯಲ್ಲಾಗಲಿ ಇಲ್ಲ. ಆದ್ದರಿಂದ ಜಗತ್ತು ಇಲ್ಲವೇ ಇಲ್ಲ. ನಿರಂತರವಾಗಿ ಬ್ರಹ್ಮವೇ ನಾನಿದ್ದೇನೆಂದು ಅನುಸಂಧಾನ ಮಾಡುತ್ತಿರಲು ದ್ವೈತವಾಗಲಿ ಅದ್ವೈತವಾಗಲಿ ತೋರುವುದಿಲ್ಲ. ॥೧೦॥

**ನಾಸ್ತಿ ನಾಸ್ತಿ ಜಗತ್ಸರ್ವಂ ಗುರುಶಿಷ್ಯಾದಿಕಂ ನ ಹಿ**
**ಸಚ್ಚಿದಾನಂದ ಮಾತ್ರೋಽಹಂ ಅನುತ್ಪನ್ನಮಿದಂ ಜಗತ್**

ಸಂಪೂರ್ಣವಾದ ಜಗತ್ತು. ಜಗತ್ತಿನಲ್ಲಿರುವ ಗುರುಶಿಷ್ಯ, ತಂದೆ–ಮಗ, ಪತಿ–ಪತ್ನಿ ಮೊದಲಾದವು ಇಲ್ಲವೇ ಇಲ್ಲವು. ಸಚ್ಚಿದಾನಂದಲಕ್ಷಣಾತ್ಮಕವಾದ ಬ್ರಹ್ಮ ಮಾತ್ರ ನಾನಾಗಿದ್ದೇನೆ. ಈ ಜಗತ್ತು ಹುಟ್ಟಿಯೇ ಇಲ್ಲ. ॥೧೧॥

## ನಾಲ್ಕನೇ ಪ್ರಕರಣವು ಮುಗಿದುದು

## ಉಪದೇಶ ವಾಕ್ಯಗಳು

**ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ।**
**ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ॥**

ಎಲೈ! ಶ್ವೇತಕೇತುವೆ ಜಗತ್ ಕಾರಣವಾದ ಬ್ರಹ್ಮವು [ಸೂಕ್ಷ್ಮ] ಆಲದ ಮರದ ಬೀಜದಂತೆ ಅಣುವಾಗಿದೆ. ಅದುವೇ ಈ ಜಗದಾಕಾರವಾಗಿದೆ. ಕಾರಣವಾದ ಅದುವೇ ಸತ್ಯವು. ಅದೇ [ಬ್ರಹ್ಮ] ಆತ್ಮನು, ಅದುವೇ ನೀನಾಗಿದ್ದಿಯೇ. ॥೧॥

ಅಭಯಂ ವೈ ಜನಕ ಪ್ರಾಪ್ತೋಽಸಿ । ಬ್ರಹ್ಮಚರ್ಯ
ಮಹಿಂಸಾಂ ಚಾಪರಿಗ್ರಹಂ ಚ ಸತ್ಯಂ ಚ
ಯತ್ನೇನ ಹೇ ರಕ್ಷತೋ ಹೇ ರಕ್ಷತ ಇತಿ ॥

ಅಷ್ಟ ಮೈಥುನದಿಂದ ರಹಿತವಾದ ಬ್ರಹ್ಮಚರ್ಯವನ್ನು ಶರೀರಾದಿ ತ್ರಿಕರಣಗಳಿಂದ ಬೇರೆಯ ಜೀವಿಗಳಿಗೆ ಹಿಂಸೆಯನ್ನು ಉಂಟು ಮಾಡದ ಅಹಿಂಸೆಯನ್ನು, ಬೇರೆಯವರು ಯಾವುದೇ ರೀತಿಯಿಂದ ಕೊಟ್ಟಿರುವುದನ್ನು ತೆಗೆದುಕೊಳ್ಳದ ಅಪರಿಗ್ರಹವನ್ನು ನಿಷ್ಕಾರವಲ್ಲದ ಸತ್ಯವನ್ನು ಎಲೈ ಮಾನವರೇ ರಕ್ಷಿಸಿರಿ ರಕ್ಷಿಸಿರಿ. ॥೨॥

ತತ್ತ್ವಮಸಿ ತ್ವಂ ತದಸಿ ।

ತತ್ಪದ ಲಕ್ಷಾರ್ಥವಾದ ಸಚ್ಚಿದಾನಂದ ಲಕ್ಷಣವಾದ ಬ್ರಹ್ಮವೇ ಅವಸ್ಥಾತ್ರಯ ಸಾಕ್ಷಿಯಾದ ತ್ವಂ ಪದ ಲಕ್ಷಾರ್ಥನಾದ ನೀನಾಗಿದ್ದೀಯೆ ಬಳಿಕ ತ್ವಂ ಪದ ಲಕ್ಷ್ಯಾರ್ಥನಾದ ಪಂಚಕೋಶಗಳಿಗೆ ಅಧಿಷ್ಠಾನನಾದ ನೀನೇ ತತ್ಪದ ಲಕ್ಷ್ಯಾರ್ಥವಾದ ಬ್ರಹ್ಮವಾಗಿದ್ದೀಯೇ. ಎಂದು ಓತಪ್ರೋತ ಭಾವದಿಂದ ಉಪದೇಶಿಸುತ್ತಿದ್ದಾರೆ. ಏಕೆಂದರೆ ಜೀವನಿಗೆ ಪರೋಕ್ಷ ಮತ್ತು ಪರಿಚ್ಛಿನ್ನವೆಂಬ ಎರಡು ವಿಧದ ಭ್ರಾಂತಿಗಳಿವೆ. ಈ ಎರಡು ಭ್ರಾಂತಿಗಳ ನಿವೃತ್ತಿಗೋಸ್ಕರ ನೀನೇ ಬ್ರಹ್ಮನಾಗಿದ್ದೀಯೇ ಬ್ರಹ್ಮವೇ ನೀನಾಗಿದ್ದೀಯೆಂದು ಉಪದೇಶಿಸಿದ್ದಾರೆ. ॥೩॥

**ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಮ್ ।**
**ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದ ಮುಪಾಸತೇ ॥**

ಯಾವುದು [ಬ್ರಹ್ಮವು] ಮನಸ್ಸಿನಿಂದ ತಿಳಿಯಲ್ಪಡುವುದಿಲ್ಲವೋ, ಅದನ್ನೇ ಬ್ರಹ್ಮವೆಂದು ಅರಿ [ತಿಳಿ] ಉಪಾಸನೆಗೆ ವಿಷಯವಾದ ಉಪಾಸ್ಯ ಮೂರ್ತಿಯು ಬ್ರಹ್ಮವಲ್ಲ. ಯಾವುದರಿಂದ ಮನದ ಸ್ವರೂಪವು ತಿಳಿಯಲ್ಪಡುತ್ತದೆಯೋ, ಮನಸ್ಸು ನಾಮರೂಪಗಳುಳ್ಳ ವಸ್ತುವನ್ನು ಚಿಂತಿಸುತ್ತದೆ. ಬ್ರಹ್ಮವುನಾಮ ರೂಪ, ಕ್ರಿಯಾ ರಹಿತವಾಗಿರುತ್ತದೆ. ಆದ್ದರಿಂದ ಅದನ್ನು ಮನಸ್ಸು ಅರಿಯಲಾರದು ಚಿದ್ರೂಪವಾದ ಬ್ರಹ್ಮವು ಜಡವಾದ ಮನಸ್ಸನ್ನು ತಿಳಿಯುತ್ತದೆ, ಆದ್ದರಿಂದ ಮನಸ್ಸಿನಿಂದ ಚಿಂತಿಸುವ ಮೂರ್ತಿಯು ಬ್ರಹ್ಮವಲ್ಲ. ॥೪॥

**ಯತ್ಪರಂ ಬ್ರಹ್ಮ ಸರ್ವಾತ್ಮಾ ವಿಶ್ವಸ್ಯಾಯತನಂ ಮಹತ್ ।**
**ಸೂಕ್ಷ್ಮಾತ್ಸೂಕ್ಷ್ಮತರಂ ನಿತ್ಯಂ ತತ್ತ್ವಮೇವ ತ್ವಮೇವ ತತ್ ॥**

ಬ್ರಹ್ಮವು ವ್ಯಾಪಕವಾಗಿದೆ. ಅದು ನಾಮರೂಪಾತ್ಮಕ ಪ್ರಪಂಚಕ್ಕೆ ಆಶ್ರಯಾಧಿಷ್ಠಾನವಾಗಿಯೂ ಸರ್ವದರ ಆತ್ಮವಾಗಿಯೂ ಸೂಕ್ಷ್ಮವಸ್ತುಗಳಿಗಿಂತಲೂ ಸೂಕ್ಷ್ಮವಾಗಿಯೂ ತ್ರಿಕಾಲಾಬಾಧ್ಯವಾಗಿಯೂ ಇದೆ. ಈ ಲಕ್ಷಣಗಳಿಂದ ಕೂಡಿದ ಬ್ರಹ್ಮವೇ ನೀನಾಗಿದ್ದೀಯೇ ನೀನೇ ಆ ಬ್ರಹ್ಮನಾಗಿದ್ದೀಯೇ. ಇಲ್ಲಿ ಜೀವನಿಗೆ ಪರೋಕ್ಷತ್ವ, ಪರಿಚ್ಛಿನ್ನತ್ವಗಳೆಂಬ ಭ್ರಾಂತಿಯು ನಿವೃತ್ತಿಗೋಸ್ಕರ ಓತ ಪ್ರೋತ ಭಾವಗಳಿಂದ ಉಪದೇಶಿಸಲ್ಪಟ್ಟಿದೆ. ॥೫॥

**ಅಂತಃಪೂರ್ಣೋ ಬಹಿಃಪೂರ್ಣೋ ಪೂರ್ಣಕುಂಭ ಇವಾರ್ಣವೇ।**
**ಅಂತಃಶೂನ್ಯೋ ಬಹಿಃ-ಶೂನ್ಯಃ ಶೂನ್ಯಃ ಕುಂಭ ಇವಾಂಬರೇ॥**

ಆತ್ಮಜ್ಞಾನಿಗಳಿಗೆ ಪರಮಾತ್ಮನು ಸಮುದ್ರದಲ್ಲಿ ಮುಳಿಗಿಸಿರುವ ಕೊಡದ ಒಳಗೂ ಹೊರಗೂ ಜಲವು ಪರಿಪೂರ್ಣವಾಗಿರುವಂತೆ ಶರೀರದ ಒಳಗೂ ಹೊರಗೂ ತುಂಬಿರುತ್ತಾನೆ. ಸ್ವರೂಪ ಜ್ಞಾನವಿಲ್ಲದೆ ದೇವರನ್ನು ಹುಡುಕುವವರಿಗೆ ಬಯಲಿನಲ್ಲಿ ಇಟ್ಟಿರುವ ಘಟದ ಒಳಗೂ ಹೊರಗೂ ಹೇಗೆ ಶೂನ್ಯವೇ ಇರುವುದೋ ಅದರಂತೆ ದೇಹದ ಒಳಗೂ ಹೊರಗೂ ಏನೂ ಕಾಣದೇ ಶೂನ್ಯವಾಗಿಯೇ ಇರುತ್ತಾನೆ. ॥೬॥

**ಮಾ ಭವ ಗ್ರಾಹ್ಯಭಾವಾತ್ಮಾ ಗ್ರಾಹಕಾತ್ಮಾ ಚ ಮಾ ಭವ ।**

ದೃಶ್ಯವಾದ ದೇಹಾದಿ ಗ್ರಾಹ್ಯಪದಾರ್ಥಗಳನ್ನು ಸತ್ಯವೆಂದು ತಿಳಿದವನಾಗಬೇಡ. ಮತ್ತು ದೃಶ್ಯವಾದ ಪದಾರ್ಥಗಳನ್ನು ತಿಳಿಯುವ ಗ್ರಾಹಕಾತ್ಮನೂ ಆಗಬೇಡ. ॥೭॥

**ಭಾವನಾಮಖಿಲಾಂ ತ್ಯಕ್ತ್ವಾ ಯಚ್ಛಿಷ್ಟಂ ತನ್ಮಯೋ ಭವ ॥**

ಅಂದರೆ ದೃಶ್ಯ ಸತ್ಯವಾದರೆ ದ್ರಷ್ಟನು ಸತ್ಯನಾದಾನು ! ದೃಶ್ಯವು ಮಿಥ್ಯಾ ಆದ್ದರಿಂದ ದ್ರಷ್ಟನು ಮಿಥ್ಯಾ. ಆದ್ದರಿಂದ ಎಲ್ಲಾ ಭಾವನೆಗಳನ್ನು ಬಿಟ್ಟು ಬಿಡಲಿಕ್ಕೆ ಬಾರದೆ ಇರುವ ಬ್ರಹ್ಮಮಯನೇ ನೀನಾಗೆಂಬ ಭಾವವು. ॥೮॥

**ದ್ರಷ್ಟೃದರ್ಶನ ದೃಶ್ಯಾದಿ ತ್ಯಕ್ತ್ವಾ ವಾಸನಯಾ ಸಹ ।**
**ದರ್ಶನ ಪ್ರಥಮಾಭಾಸಮಾತ್ಮನಂ ಕೇವಲಂ ಭಜ ॥**

ವಾಸನಾ ಸಹಿತವಾಗಿ ದೃಷ್ಟು [ನೋಡುವವನು] ಜ್ಞಾನವು, ದೃಶ್ಯಾದಿ ಕಾಣುವ ಪದಾರ್ಥಗಳನ್ನು [ತ್ರಿಪುಟಿಗಳನ್ನು ಬಿಟ್ಟು] ದೃಶೀ ರೂಪವಾದ ಆತ್ಮನೇ ನಾನೆಂಬುವದಾಗಿ ತಿಳಿ ಎಂಬ ಭಾವವು. ||೯||

**ಚಿತ್ತಾಕಾಶಂ ಚಿದಕಾಶಮಾಕಾಶಂ ಚ ತೃತೀಯಕಮ್**
**ದ್ವಾಭ್ಯಾಂ ಶೂನ್ಯತರಂ ವಿದ್ಧಿ ಚಿದಾಕಾಶಂ ಮಹಾಮುನೇ ।**

ಆಕಾಶವು ಚಿತ್ತಾಕಾಶವೆಂದು, ಚಿದಾಕಾಶವೆಂದು ಭೂತಾಕಾಶ ವೆಂದು ಮೂರು ರೀತಿಯಾಗಿದೆ. ಎಲೈ ಮನನ ಶೀಲನಾದ ಮುನಿಯೇ! ಚಿದಾಕಾಶವು [ಬ್ರಹ್ಮವು] ಚಿತ್ತಾಕಾಶ, ಭೂತಾಕಾಶಗಳಿಂದ ರಹಿತ ವಾದದ್ದನ್ನಾಗಿ ತಿಳಿ. [ಬೇರೆಯಾದದ್ದನ್ನಾಗಿ ತಿಳಿ.] ||೧೦||

**ಧ್ಯಾನತೋ ಹೃದಯಾಕಾಶೇ ಚಿತಿ ಚಿಚ್ಚಕ್ರಧಾರಯಾ**
**ಮನೋ ಮಾರಯ ನಿಃಶಂಕಂ ತ್ವಾಂ ಪ್ರಬಧ್ನಂತಿ ನಾರಯಃ ||**

ನಿನ್ನ ಹೃದಯವೆಂಬ ಆಕಾಶದಲ್ಲಿ ಚಿದ್ರೂಪವಾದ ಬ್ರಹ್ಮವೇ ನಾನಾಗಿದ್ದೇನೆಂದುಅನುಸಂಧಾನ ಮಾಡುತ್ತಾ ಆ ಬ್ರಹ್ಮಾನು ಸಂಧಾನ ವೆಂಬ ಚಕ್ರದ ಹೊಡೆತದಿಂದ ಸಂಕಲ್ಪ ವಿಕಲ್ಪವಾದ ಮನಸ್ಸನ್ನು ಸಂದೇಹವಿಲ್ಲದೇ ನಾಶಗೊಳಿಸು ಆಗ ಅಜ್ಞಾನ ಮತ್ತು ಅಜ್ಞಾನ ಜನ್ಯವಾದ ಕಾಮಕ್ರೋಧಾದಿಗಳೆಂಬ ಶತ್ರುಗಳು ನಿನ್ನನ್ನು ಬಂಧಿಸ ಲಾರವು. ||೧೧||

**ಭೋಗೈಕವಾಸನಾಂ ತ್ಯಕ್ತ್ವಾ ತ್ಯಜ ತ್ವಂ ಭೇದವಾಸನಾಮ್**
**ಭಾವಾ ಭಾವೌ ತತಸ್ತ್ಯಕ್ತ್ವಾ ನಿರ್ವಿಕಲ್ಪಃ ಸ್ಥಿರೋ ಭವ||**

ನೀನು ಶಬ್ದಸ್ಪರ್ಶಾದಿ ವಿಷಯಗಳನ್ನು ಭೋಗಿಸಬೇಕೆಂಬ ವಾಸನೆ ಯನ್ನು ಬಿಟ್ಟು ಮತ್ತು ಪರಮಾತ್ಮನು ನನಗಿಂತ ಬೇರೆಯಾಗಿದ್ದಾನೆಂಬ ಭೇದವಾಸನೆಯನ್ನು ಬಿಡು, ತದನಂತರ ಭಾವಾಭಾವಾಗಳನ್ನು ಬಿಟ್ಟು ಸಕಲ ಸಂಕಲ್ಪಗಳಿಂದ ರಹಿತನಾಗು. ಅಂದರೆ ನಿರ್ವಿಕಲ್ಪ ಸ್ವರೂಪವು ನೀನಾಗಿರೆಂಬ ಭಾವವು. ॥೧೨॥

**ತ್ಯಜ ಧರ್ಮಮಧರ್ಮಂ ಚ ಉಭೇ ಸತ್ಯಾನೃತೇ ತ್ಯಜ ।**
**ಉಭೇ ಸತ್ಯಾನೃತೇ ತ್ಯಕ್ತ್ವಾ ಯೇನ ತ್ಯಜಸಿ ತತ್ತ್ಯಜ ॥**

ಧರ್ಮ ಮತ್ತು ಅಧರ್ಮಗಳನ್ನು ಬಿಡು. ಅಧರ್ಮವು ಹೇಗೆ ಜನ್ಮಕ್ಕೆ ಕಾರಣವಾಗಿದೆಯೋ ಅದರಂತೆ ಧರ್ಮವೂ ಜನ್ಮಕ್ಕೆ ಕಾರಣ ವಾದ್ದರಿಂದ ಅದನ್ನೂ ಬಿಡಬೇಕು. ಸತ್ಯ ಮತ್ತು ಸುಳ್ಳು ಈ ಎರಡನ್ನೂ ಬಿಡು. ಸತ್ಯ ಸುಳ್ಳು ಇವೆರಡನ್ನೂ ಬಿಟ್ಟ ನಂತರ ತ್ಯಾಗ ಮಾಡಿ ದ್ದೇನೆಂಬ ಭಾವನೆಯನ್ನೂ ತ್ಯಜಿಸು. ॥೧೩॥

**ಆತ್ಮನ್ಯತೀತೇ ಸರ್ವಸ್ಮಾತ್ಸರ್ವರೂಪೇಽಥವಾ ತತೇ ।**
**ಕೋ ಬಂಧಃ ಕಸ್ಯ ವಾ ಮೋಕ್ಷೋ ನಿರ್ಮೂಲಂ ಮನನಂ ಕುರು ॥**

ಸಕಲ ನಾಮರೂಪಾತ್ಮಕ ಅನಾತ್ಮಗಳಿಗಿಂತಲೂ ಅವುಗಳ ಧರ್ಮ ಗಳಿಗಿಂತಲೂ ಬ್ರಹ್ಮವು ವಿಲಕ್ಷಣವಾಗಿದೆಯೆಂದು ತಿಳಿದು ಕೊಳ್ಳು. ಅಥವಾ ಬಂಗಾರವೇ ಆಭರಣವಾದಂತೆ ಪರಬ್ರಹ್ಮವೇ ವಿವರ್ತೋಪಾದಾನದಿಂದ ಜಗದಾಕಾರವಾಗಿರುತ್ತದೆಂದು ತಿಳಿದುಕೊಳ್ಳ ಬೇಕು. ಹೀಗೆ ನೇತ್ಯಾತ್ಮದಿಂದಾಗಲಿ, ಸರ್ವಾತ್ಮಕದಿಂದಾಗಲಿ ಬ್ರಹ್ಮವು

ತನ್ಮಾತ್ರವೆಂದು ಅರಿತರೆ ? ಬಂಧವು ಯಾರಿಗೆ ಮೋಕ್ಷವು ಯಾರಿಗೆ ? ಅಂದರೆ ಬಂಧಮೋಕ್ಷಗಳು ಇಲ್ಲವೆಂದು ಚಿಂತನಮಾಡುವವನಾಗು. ॥೧೪॥

ಆಶಾ ಯಾತು ನಿರಾಶಾತ್ವಮಭಾವಂ ಯಾತು ಭಾವನಾ ।
ಅಮನಸ್ತ್ವಂ ಮನೋ ಯಾತು ತವಾಸಂಗೇನ ಜೀವತಃ ॥

ಅನೇಕ ವಸ್ತುಗಳನ್ನು ಬಯಸುವ ಆಶೆಯು ಹೋಗಲಿ, ಏನೂ ಇಲ್ಲ ಎಂಬ ನಿರಾಶಾ ಭಾವನೆಯು ಹೋಗಲಿ, ನೀನು ಮನೋ ರಹಿತ ನಾಗಿದ್ದೀಯೆ ! ಆದ್ದರಿಂದ ಅಸಂಗದಿಂದ ಜೀವಿಸುವ ನಿನ್ನ ಮನಸ್ಸು ಹೋಗಲಿ ! ॥೧೫॥

ಏಕಮಾದ್ಯಂತರಹಿತಂ ಚಿನ್ಮಾತ್ರಮಮಲಂ ತತಮ್ ।
ಖಾದಪ್ಯತಿತರಾಂ ಸೂಕ್ಷ್ಮಂ ತದ್ಬ್ರಹ್ಮಾಸ್ಮಿ ನ ಸಂಶಯಃ ॥

ಉತ್ಪತ್ತಿ ನಾಶ ರಹಿತವಾದ ಜ್ಞಾನ ಸ್ವರೂಪವಾದ ಪರಿಶುದ್ಧ ವಾದ ಸ್ವಗತಾದಿ ಭೇದರಹಿತವಾದ ವ್ಯಾಪಕವಾದ. ಆಕಾಶಕ್ಕಿಂತಲೂ ಅತ್ಯಂತ ಸೂಕ್ಷ್ಮವಾದ ಬ್ರಹ್ಮವೇ ನೀನಾಗಿದ್ದೀಯೆ. ಈ ವಿಷಯದಲ್ಲಿ ಸಂಶಯವಿಲ್ಲ. ॥೧೬॥

ರಕ್ಷಕೋ ವಿಷ್ಣುರಿತ್ಯಾದಿ ಬ್ರಹ್ಮಾ ಸೃಷ್ಟೇಸ್ತು ಕಾರಣಮ್ ।
ಸಂಹಾರೇ ರುದ್ರ ಇತ್ಯೇವಂ ಸರ್ವಂ ಮಿಥ್ಯೇತಿ ನಿಶ್ಚಿನು ॥

ವಿಷ್ಣುವು ರಕ್ಷಕನೆಂಬ ಬ್ರಹ್ಮನು ಸೃಷ್ಟಿಗೆ ಕಾರಣನೆಂಬ ರುದ್ರನು ಸಂಹಾರ ಮಾಡುವನೆಂಬ ಮೊದಲಾದ ಎಲ್ಲಾ ಭಾವನೆಗಳನ್ನು ಮಿಥ್ಯೆ ಯೆಂದು ನಿಶ್ಚಯಿಸು. ॥೧೭॥

ಮತ್ತ್ಯಕ್ತ್ತಂ ನಾಸ್ತಿ ಕಿಂಚಿದ್ವಾ ಮತ್ತ್ಯಕ್ತಾ ಪೃಥಿವೀ ತು ವಾ |
ಮಯಾತಿರಿಕ್ತಂ ಯದ್ಯದ್ವಾ ತತ್ತನ್ನಾಸ್ತೀತಿ ನಿಶ್ಚಿನು ||

ಜಗತ್ಕಾರಣನಾದ ನನಗಿಂತಲೂ ವ್ಯತಿರಿಕ್ತವಾಗಿ ಸ್ವಲ್ಪವೂ ವಸ್ತುವಿಲ್ಲ. ಅಥವಾ ಈ ವಿಶಾಲವಾದ ಪೃಥ್ವಿಯೂ ಕೂಡ ತನಗಿಂತಲೂ ಬೇರೆಯಾಗಿಲ್ಲ. ನನಗಿಂತಲೂ ಭಿನ್ನವಾದದ್ದು ಯಾವುದ್ಯಾವದಿದೆಯೋ ಅದನ್ನು ಇಲ್ಲದ್ದೆಂದು ನಿಶ್ಚಯಿಸು. ||೧೮||

ಅನಾತ್ಮೇತಿ ಪ್ರಸಂಗೋ ವಾ ಅನಾತ್ಮೇತಿ ಮನೋಽಪಿ ವಾ |
ಅನಾತ್ಮೇತಿ ಜಗದ್ವಾಪಿ ನಾಸ್ತ್ಯನಾತ್ಮೇತಿ ನಿಶ್ಚಿನು

ಅನಾತ್ಮಾ [ದೇಹಾದಿಗಳ ಪ್ರಸಂಗವಾಗಲಿ] ಮನಸ್ಸೂ ಕೂಡ ಅನಾತ್ಮವೆಂದು ಜಗತ್ತೂ ಸಹ ಅನಾತ್ಮವೆಂದು ಅನಾತ್ಮವು ಇಲ್ಲವೆಂದು ನಿಶ್ಚಯಿಸು. ||೧೯||

ಆದಿಮಧ್ಯಾವಸಾನೇಷು ದುಃಖಂ ಸರ್ವಮಿದಂ ಯತಃ |
ತಸ್ಮಾತ್ಸರ್ವಂ ಪರಿತ್ಯಜ್ಯ ತತ್ತ್ವನಿಷ್ಠೋ ಭವಾನಘ ||

ಈ ನಾಮರೂಪಾತ್ಮಕ ಪ್ರಪಂಚವು ಯಾವ ಕಾರಣದಿಂದ ಮೊದಲು ಮಧ್ಯದಲ್ಲಿ ಕೊನೆಯಲ್ಲಿ [ಬಾಲ್ಯ, ಯೌವನ, ವೃದ್ಧಾಪ್ಯಗಳಲ್ಲಿ ಎಲ್ಲವೂ ದುಃಖ ಸ್ವರೂಪವಾಗಿದೆ. ಆದ್ದರಿಂದ ಎಲೈ ಪಾಪರಹಿತನೇ ! ಎಲ್ಲವನ್ನೂ ಬಿಟ್ಟು ನಿನ್ನ ಆತ್ಮವೇ ಆಗಿರುವ ಬ್ರಹ್ಮನಲ್ಲಿ ನಿಷ್ಠೆಯುಳ್ಳವನಾಗು. ||೨೦||

ನಿದ್ರಾಯಾ ಲೋಕವಾರ್ತಾಯಾಃ ಶಬ್ದಾದೇರಾತ್ಮವಿಸ್ಮೃತೇಃ ।
ಕ್ವಚಿನ್ನಾವಸರಂ ದತ್ವಾ ಚಿಂತಯಾತ್ಮಾನಮಾತ್ಮನಿ ॥

ನಿದ್ರೆಯಿಂದ, ಲೌಕಿಕ ವೈದಿಕ ಮಾತುಗಳಿಂದ, ತನ್ನ ಆತ್ಮನನ್ನು ಮರೆಯುವಿಕ್ಕೆ ಸ್ವಲ್ಪವೂ ಅವಕಾಶವನ್ನು ಕೊಡದೇ ತನ್ನಲ್ಲಿ ಅಂದರೆ ಮನಸ್ಸಿನಲ್ಲಿ ತನ್ನನ್ನು ಸಚ್ಚಿದಾನಂದ ಬ್ರಹ್ಮವೆಂದು ಚಿಂತಿಸಬೇಕು. ॥೨೧॥

ಸರ್ವವ್ಯಾಪಾರಮುತ್ಸೃಜ್ಯ ಅಹಂ ಬ್ರಹ್ಮೇತಿ ಭಾವಯ । ಅಹಂ ಬ್ರಹ್ಮೇತಿ ನಿಶ್ಚಿತ್ಯ ತ್ವಹಂಭಾವಂ ಪರಿತ್ಯಜ ॥೨೧॥

ಎಲ್ಲ ವ್ಯಾಪಾರಗಳನ್ನು ಬಿಟ್ಟು ನಾನೇ ಬ್ರಹ್ಮವೆಂದು ಭಾವಿಸು, ನಾನೇ ಬ್ರಹ್ಮನೆಂದು ನಿಶ್ಚಯಿಸಿ ಸರ್ವ ಅನರ್ಥಕವಾದ ಅಹಂಕಾರವನ್ನು ಬಿಡು. ॥೨೨॥

ಘಟಾಕಾಶಂ ಮಹಾಕಾಶ ಇವಾತ್ಮಾನಂ ಪರಾತ್ಮನಿ ।
ವಿಲಾಪ್ಯಾಖಂಡಭಾವೇನ ತೂಷ್ಣೀಂ ಭವ ಸದಾ ಮುನೇ

ಘಟಾಕಾಶವನ್ನು ಮಹಾಕಾಶಕ್ಕಿಂತಲೂ ಭೇದವಿಲ್ಲ ಎಂದು ತಿಳಿವಂತೆ [ಘಟಾಕಾಶವನ್ನು ಮಹಾಕಾಶದಲ್ಲಿ ಹೇಗೆ ವಿಲಯ ಮಾಡುತ್ತೇವೆಯೋ] ಅದರಂತೆ ಜೀವಾತ್ಮನನ್ನು ಪರಮಾತ್ಮನಲ್ಲಿ ವಿಲಯ ಮಾಡಿ ಎಲೈ ಮುನಿಯೇ! ಅಖಂಡ ಪರಿಪೂರ್ಣ ಬ್ರಹ್ಮವೇ ನಾನೆಂಬ ಭಾವನೆಯಿಂದ ಯಾವಾಗಲೂ ಸುಮ್ಮನಿರು. ॥೨೩॥

ಚಿದಿಹಾಸ್ತೀತಿ ಚಿನ್ಮಾತ್ರಮಿದಂ ಚಿನ್ಮಯ ಮೇವ ಚ
ಚಿತ್ತ್ವಂ ಚಿದಹಮೇತೇ ಚ ಲೋಕಾಶ್ಚಿದಿತಿ ಭಾವಯ ॥

ಜಗತ್ಕಾರಣವಾದ ಚಿದ್ರೂಪ ಬ್ರಹ್ಮವು ಮಡಕೆಯಲ್ಲಿ ಮಣ್ಣು ಇದ್ದಂತೆ ಜಗತ್ತಿಗೆ ಆಧಾರಭೂತವಾಗಿದೆ-ಆದ್ದರಿಂದ ಜಗತ್ತೂ ಸಹ ಚಿದ್ರೂಪವೆ, ಚಿದ್ರೂಪವಾದಬ್ರಹ್ಮವನ್ನು ಬಿಟ್ಟು ಬೇರೆ ಯಾವದೂ ಇಲ್ಲವೆಂದು ಏಕಮೇವಾದ್ವಿತೀಯಂ ಎಂದು ಶ್ರುತಿಗಳು ಹೇಳುತ್ತವೆ. ಆದ್ದರಿಂದ ನಾನು ಇವರು [ಈ ಮನುಷ್ಯರು] ಮತ್ತು ಜಗತ್ತೂ ಸಹ ಚಿದ್ರೂಪವಾದ ಬ್ರಹ್ಮವೇ ಎಂದು ನಿಶ್ಚೈಸು. ॥೨೪॥

ಸತ್ಯಚಿದ್ಘನಮಖಂಡಮದ್ವಯಂ ಸರ್ವದೃಶ್ಯರಹಿತಂ
ನಿರಾಮಯಮ್ ।
ಯತ್ಪದಂ ವಿಮಲದ್ವಯಂ ಶಿವಂ ತತ್ಸದಾಹಮಿತಿ
ಮೌನಮಾಶ್ರಯ ॥

ತ್ರಿಕಾಲದಲ್ಲಿಯೂ ಬಾಧಾರಹಿತವಾದ ಸ್ವಯಂ ಪ್ರಕಾಶವಾದ ದೇಶ ಕಾಲಾದಿ ಪರಿಚ್ಛೇದರಹಿತವಾದ (ಪೂರ್ಣವಾದ) ತನಗೆ ಎರಡನೆಯದಿಲ್ಲದಿರುವ ಕಾಣುವ ಸಕಲ ಪ್ರಪಂಚಕ್ಕಿಂತಲೂ ವಿಲಕ್ಷಣವಾದ, ದುಃಖರಹಿತವಾದ ಮಾಯಾ, ಅವಿದ್ಯೆ, ಉಪಾಧಿರಹಿತವಾದ ಯಾವ ಪರಬ್ರಹ್ಮಶಿವ ಸ್ವರೂಪವಿದೆಯೋ ಅದುವೇ ನಾನಾಗಿದ್ದೇನೆಂದು ಮೌನಿಯಾಗಿರು. ಅಂದರೆ ಇಲ್ಲಿ ಪರಬ್ರಹ್ಮದ ಸ್ವರೂಪವನ್ನು ಹೇಳಿದ್ದಾರೆ ಎಂಬ ತಾತ್ಪರ್ಯವು. ॥೨೫॥

ಜನ್ಮಮೃತ್ಯುಸುಖದುಃಖವರ್ಜಿತಂ ಜಾತಿನೀತಿ ಕುಲಗೋತ್ರ
ದೂರಗಮ್ ।
ಚಿದ್ವಿವರ್ತಜಗತೋಽಸ್ಯ ಕಾರಣಂ ತತ್ಸದಾಹಮಿತಿ
ಮೌನಮಾಶ್ರಯ ॥

ಹುಟ್ಟು-ಸಾವು, ಸುಖ-ದುಃಖಗಳಿಂದ ರಹಿತವಾದ ಬ್ರಾಹ್ಮಣಾದಿ ಜಾತಿಗಳು, ಆ ಜಾತಿಗಳಿಗೆ ಹೇಳಿರುವ ನೀತಿಗಳು, ಕರ್ಮ, ಕನ್ನಡಿಗ ಆಂಧ್ರ, ದ್ರಾವಿಡರೆಂಬ ಕುಲಗಳಿಂದಲೂ, ಕಶ್ಯಪಾದಿಗೋತ್ರಗಳಿಂದಲೂ, ದೂರವಾದ (ರಹಿತವಾದ) ಈ ನಾಮರೂಪವಾದ ಜಗತ್ತಿಗೆ ವಿವರ್ತೋಪಾದಾನ ಕಾರಣವಾದ ಆ ಬ್ರಹ್ಮವೇ ಯಾವಾಗಲೂ ನಾನಾಗಿದ್ದೇನೆಂದು ಮೌನವಾಗಿರು. ॥೨೬॥

ಪೂರ್ಣಮದ್ವಯಮಖಂಡಚೇತನಂ ವಿಶ್ವಭೇದ ಕಲನಾದಿ
ವರ್ಜಿತಮ್ ।
ಅದ್ವಿತೀಯಪರಸಂವಿದಾತ್ಮಕಂ ತತ್ಸದಾಹಮಿತಿ
ಮೌನಮಾಶ್ರಯ ॥

ಜೀವ, ಜಗತ್ತು ಮೊದಲಾದ ಭೇದಗಳಿಲ್ಲದ, ಪೂರ್ಣವಾದ, ತನಗೆರಡನೆಯದಿಲ್ಲದ, ಅಖಂಡ ಅರೂಪವಾದ ಬ್ರಹ್ಮವೇ ನಾನೆಂದು ತಿಳಿದು ಮೌನವಾಗಿರು. ॥೨೭॥

ಸ್ವಾತ್ಮನೋಽನ್ಯತಯಾ ಭಾತಂ ಚರಾಚರಮಿದಂ ಜಗತ್ ।
ಸ್ವಾತ್ಮಮಾತ್ರತಯಾ ಬುದ್ಧ್ವಾ ತದಸ್ಮೀತಿ ವಿಭಾವಯ

ತನ್ನ ಆತ್ಮನಿಗಿಂತಲೂ ಬೇರೆಯೋ ಎಂಬಂತೆ ಕಂಡು ಬರುವ ಚರಾಚರಾತ್ಮಕವಾದ ಜಗತ್ತನ್ನು ತನ್ನ ಸ್ವರೂಪವೆಂದು ತಿಳಿದು ಆ ಬ್ರಹ್ಮವೇ ನಾನೆಂದು ಭಾವಿಸು. (ತಿಳಿ) ॥೨೭॥

ಪ್ರವಿಲಾಪ್ಯ ಪ್ರಕೃತಿಂ ಕೃತ್ಸ್ನಾಂ ಸಂಭವವ್ಯತ್ಯಯಕ್ರಮಾತ್ ।
ಪರಿಶಿಷ್ಟಂ ಚ ಚಿನ್ಮಾತ್ರಂ ಚಿದಾನಂದಂ ವಿಚಿಂತಯ ॥

ಆಕಾಶವನ್ನು ಭೂತಾದಿ ಅಹಂಕಾರದಲ್ಲಿಯೂ, ಅಹಂಕಾರವನ್ನು ಮಹತತ್ತ್ವದಲ್ಲಿಯೂ, ಮಹತತ್ತ್ವವನ್ನು ಪ್ರಕೃತಿಯಲ್ಲಿಯೂ, (ಕಾರ್ಯವನ್ನು ಕಾರಣದಲ್ಲಿ) ಪ್ರಕೃತಿಯನ್ನು ಬ್ರಹ್ಮದಲ್ಲಿಯೂ ಲಯ ಮಾಡಬೇಕು. ಕಳೆಯಲಿಕ್ಕೆ ಬಾರದೆ ಉಳಿದ ಸಚ್ಚಿದಾನಂದ ಬ್ರಹ್ಮವೇ ನಾನೆಂದು ಮನನ ಮಾಡಬೇಕು. ॥೨೮॥

ಐದನೆಯ ಪ್ರಕರಣ ಮುಗಿದುದು.

## ಸಾರ್ಧಾಂತಿಕಜೀವಬ್ರಹ್ಮೈಕ್ಯಬೋಧಕ ವಾಕ್ಯಗಳು

ಸ ಯಶ್ಚಾಯಂ ಪುರುಷೇ ॥ ಯಶ್ಚಾಸಾವಾದಿತ್ಯೇ ॥ ಸ ಏಕಃ ॥ ಸತ್ಯಮಾತ್ಮಾ ಬ್ರಹ್ಮೈವ ಬ್ರಹ್ಮಾತ್ಮೈವಾತ್ರ ಹ್ಯೇವ ನ ವಿಚಿಕಿತ್ಸ್ಯಮ್ ॥

ಮತ್ತು ಯಾವನು ಸೂರ್ಯ ಮಂಡಲದಲ್ಲಿದ್ದಾನೆಯೋ, ಯಾವನು ಈ ಶರೀರದಲ್ಲಿದ್ದಾನೋ, ಅವನು ಒಬ್ಬನೆ 'ಆತ್ಮನು ಬ್ರಹ್ಮವೆ'. ಈ ಮಾತು ಸತ್ಯವು ಮತ್ತು ಬ್ರಹ್ಮವೇ ಆತ್ಮನಾಗಿದ್ದಾನೆ, ಈ ವಿಷಯದಲ್ಲಿ ಸಂಶಯ ಪಡಬಾರದು. ॥೧॥

**ತ್ವಂ ಬ್ರಹ್ಮಾಸಿ ।। ಅಹಂ ಬ್ರಹ್ಮಾಸ್ಮಿ ॥ ಆನಯೋರಂತರಂ ನ ವಿದ್ಯತೇ ತ್ವಮೇವಾಹ ಮಹಮೇವತ್ವಮ್ ॥**

ಎಲೈ ಶಿಷ್ಯನೇ ! ನೀನು ಬ್ರಹ್ಮವೇ ಇದ್ದೀಯೇ ! ನಾನೂ ಬ್ರಹ್ಮವೇ ಆಗಿದ್ದೇನೆ. ಸ್ವರೂಪದೃಷ್ಟಿಯಿಂದ ನಮ್ಮಿಬ್ಬರಲ್ಲಿ ಯಾವ ಭೇದವೂ ಇಲ್ಲ. ನೀನೇ ನಾನು. ನಾನೇ ನೀನು ಎಂದು ತಿಳಿದುಕೋ. ॥೨॥

**ಗತಾಃ ಕಲಾಃ ಪಂಚದಶ ಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿ ದೇವತಾಸು । ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽ ವ್ಯಯೇ ಸರ್ವ ಏಕೀಭವಂತಿ ॥**

ವಿದೇಹಕೈವಲ್ಯದಲ್ಲಿ ಪ್ರಾಣಾದಿ ಹದಿನೈದು ಕಲೆಗಳು, ನೇತ್ರ ಮೊದಲಾದ ಇಂದ್ರಿಯ ಅಧಿಷ್ಠಾನ ದೇವತೆಗಳಾದ ಸೂರ್ಯ ಮುಂತಾದವರು ತಮ್ಮ ತಮ್ಮ ಕಾರಣದಲ್ಲಿ ಲಯವನ್ನು ಹೊಂದುತ್ತವೆ. ಮತ್ತು ಸಂಚಿತ ಆಗಮಿ ಕರ್ಮಗಳು ನಾಶವಾಗುತ್ತವೆ, ಜಲವು ಒಣಗಲಾಗಿ ಜಲಗತವಾದ ಬಿಂಬವು ಸೂರ್ಯನನ್ನು ಸೇರುವಂತೆ

ಜ್ಞಾನದಿಂದ ಸೂಕ್ಷ್ಮ ಶರೀರನಾಶವಾದನಂತರದಲ್ಲಿ ಈ ಜೀವಾತ್ಮನು ಬಿಂಬ ಭೂತನಾದ ಪರಮಾತ್ಮನಲ್ಲಿ ಐಕ್ಯನಾಗುತ್ತಾನೆ. ॥೩॥

ಯೇನೇಕ್ಷತೇ ಶೃಣೋತೀದಂ ಜಿಘ್ರತಿ ವ್ಯಾಕರೋತಿ ಚ ।
ಸ್ವಾದ್ವಸ್ವಾದು ವಿಜಾನಾತಿ ತತ್ಪ್ರಜ್ಞಾನಮುದೀರಿತಮ್ ॥

ಯಾವ ಚೈತನ್ಯದಿಂದ ಕಣ್ಣು ರೂಪವನ್ನು ನೋಡುತ್ತದೆಯೋ ಕಿವಿಯು ಶುಭಾಶುಭ ಶಬ್ದಗಳನ್ನು ಕೇಳುತ್ತದೆಯೋ, ಮೂಗು ಸುಗಂಧ ದುರ್ಗಂಧಗಳನ್ನು ತಿಳಿಯುತ್ತದೆಯೋ, ವಾಣಿಯು ಲೌಕಿಕ ವೈದಿಕ ಶಬ್ದಗಳನ್ನು ಉಚ್ಚರಿಸುತ್ತದೆಯೋ, ನಾಲಿಗೆಯು ಸಿಹಿ ಕಹಿ ಗಳನ್ನು ತಿಳಿಯುತ್ತದೆಯೋ, ಅದು ಪ್ರಜ್ಞಾನವೆಂದು ಹೇಳಲ್ಪಟ್ಟಿದೆ, ಅಂದರೆ ಆತ್ಮನು ಸ್ವಯಂ ಪ್ರಕಾಶನು ॥೪॥

ಚತುರ್ಮುಖೇಂದ್ರದೇವೇಷು ಮನುಷ್ಯಾಶ್ವಗವಾದಿಷು ।
ಚೈತನ್ಯಮೇಕಂ ಬ್ರಹ್ಮಾತಃ ಪ್ರಜ್ಞಾನಂ ಬ್ರಹ್ಮ ಮಯ್ಯಪಿ ॥

ಉತ್ತಮರಾದ ಚತುರ್ಮುಖ ಬ್ರಹ್ಮನೇ ಮೊದಲುಗೊಂಡು ಇಂದ್ರನವರೆಗಿರುವ ದೇವತೆಗಳಲ್ಲಿ, ಮಧ್ಯಮರಾದ ಮನುಷ್ಯರಲ್ಲಿ, ನಿಕೃಷ್ಟವಾದ ಕುದುರೆ, ಹಸು, ಎತ್ತು, ಕತ್ತೆ, ಮುಂತಾದವುಗಳಲ್ಲಿ ಜ್ಞಾನಘನವಾದ ಒಂದೇ ಚೈತನ್ಯವೇ ಇರುತ್ತದೆ. ಆದ್ದರಿಂದ ನನ್ನಲ್ಲಿಯೂ ಕೂಡ ಬ್ರಹ್ಮವೇ ಇರುತ್ತದೆ. ॥೫॥

**ಪರಿಪೂರ್ಣಃ ಪರಾತ್ಮಾಽಸ್ಮಿನ್ ದೇಹೇ ವಿದ್ಯಾಧಿಕಾರಿಣಿ ।**
**ಬುದ್ಧೇಸ್ಸಾಕ್ಷಿತಯಾ ಸ್ಥಿತ್ವಾ ಸ್ಫುರನ್ನಹಮಿತೀರ್ಯತೇ ॥**

ಸ್ವಾಭಾವಿಕವಾಗಿ ದೇಶಕಾಲವಸ್ತುಗಳಿಂದ ಪರಿಚ್ಛಿನ್ನತ್ವವಿಲ್ಲದ, ಅಖಿಡೈಕರಸವಾದ, ಪರಮಾತ್ಮನು ತನ್ನಲ್ಲಿ ಮಾಯಾಕಲ್ಪಿತವಾದ, ನಾಮರೂಪಾತ್ಮಕವಾದ, ಈ ಜಗತ್ತಿನಲ್ಲಿ ಶಮಾದಿಸಾಧನಸಂಪನ್ನತ್ವದಿಂದ ಬ್ರಹ್ಮಜ್ಞಾನಸಂಪಾದನೆಗೆ ಯೋಗ್ಯವಾದ, ಶ್ರವಣಾದ್ಯನುಷ್ಠಾನವುಳ್ಳದ್ದಾದ ಈ ಮನುಷ್ಯಾದಿ ಶರೀರದಲ್ಲಿ ಬುದ್ಧ್ಯುಪಲಕ್ಷಿತವಾದ, ಸೂಕ್ಷ್ಮಶರೀರಕ್ಕೆ ಸಾಕ್ಷಿತ್ವದಿಂದ ನಿರ್ವಿಕಾರಿಯಾಗಿ ಅಂತಃಕರಣಾದಿಗಳನ್ನು ಬೆಳಗುತ್ತಿದ್ದು ಯಾವ ವಸ್ತುವು ಸ್ಫುರಿಸುವದೋ, ಅದು, ಲಕ್ಷಣಾ ವೃತ್ತಿಯಿಂದ ( 'ಅಹಂ' ) ನಾನೆಂಬ ಪದದಿಂದ ಹೇಳಲ್ಪಡುವದು. ಅಂದರೆ; 'ಶಕ್ಯಸಂಬಂಧೋಹಿಲಕ್ಷಣಾ' ಶಕ್ಯಾರ್ಥ ಸಂಬಂಧಿಯಾದದ್ದೇ ಲಕ್ಷಣೆಯೆನ್ನಲ್ಪಡುವದು. ಇಲ್ಲಿ ಅಹಂಪದಕ್ಕೆ ಶಕ್ಯಾರ್ಥವಾಗಿ ಅಹಂಕಾರ ವಿಶಿಷ್ಟ ಚಿದಾಭಾಸನಿಗೆ ಸಂಬಂಧಿಯಾದ ಪ್ರತ್ಯಗಾತ್ಮನಲ್ಲಿ ಲಕ್ಷಣೆ ಇರುವುದರಿಂದ ಈ ಪ್ರತ್ಯಗಾತ್ಮನೇ ಭಾಗತ್ಯಾಗಲಕ್ಷಣೆಯಿಂದ ವಾಚ್ಯಾರ್ಥೈಕದೇಶವಾದ ಲಕ್ಷ್ಯಾರ್ಥದಿಂದ ಲಕ್ಷಿಸಲ್ಪಟ್ಟು ಅಹಂಪದದಿಂದ ಹೇಳಲ್ಪಡುವನೆಂದು ತಾತ್ಪರ್ಯ. ॥೬॥

**ಸ್ವತಃ ಪೂರ್ಣಃ ಪರಾತ್ಮಾತ್ರ ಬ್ರಹ್ಮಶಬ್ದೇನ ವರ್ಣಿತಃ ।**
**ಅಸ್ಮೀತ್ಯೈಕ್ಯ ಪರಾಮರ್ಶಾತ್ತೇನ ಬ್ರಹ್ಮಭವಾಮ್ಯಹಮ್ ॥**

ಸ್ವಾಭಾವಿಕವಾಗಿ ದೇಶಕಾಲವಸ್ತುಗಳಿಂದ ಪರಿಚ್ಛಿನ್ನತ್ವವಿಲ್ಲದ ಪೂರ್ವೋಕ್ತ ಪರಮಾತ್ಮನು 'ಅಹಂಬ್ರಹ್ಮಾಸ್ಮಿ' ಯೆಂಬ ಈ ಮಹಾವಾಕ್ಯದೊಳಗಣ ಬ್ರಹ್ಮಪದದಿಂದ, ಲಕ್ಷಣಾವೃತ್ತಿಯಿಂದ ಹೇಳಲ್ಪಡುವನು ಮತ್ತು ಈ ಮಹಾವಾಕ್ಯದೊಳಗುಳ್ಳ [ಅಸ್ಮಿ] ಇದ್ದೇನೆಂಬ ಪದದಿಂದ 'ಅಹಂ' 'ಬ್ರಹ್ಮ' ಎಂಬ ಎರಡು ಪದಗಳಿಗೆ ಸಾಮಾನಾಧಿಕರಣ್ಯ ಸಂಬಂಧದಿಂದ ಲಭಿಸತಕ್ಕ ಜೀವಬ್ರಹ್ಮೈಕ್ಯವನ್ನು ಬೋಧಿಸುವದು. ಇದರಿಂದ ಏನಾಯಿತು ? ಅಂದರೆ; ಪದದ್ವಯಸಾಮಾನಾಧಿಕರಣ್ಯ ಸಂಬಂಧದಿಂದ 'ಅಹಂಪದ' ಬ್ರಹ್ಮಪದ' ಲಕ್ಷ್ಯಾರ್ಥಗಳಿಂದ ಯಾವ ಕಾರಣದಿಂದ ಅಸ್ಮಿಯೆಂಬ ಪದವು ಭಾಗತ್ಯಾಗ ಲಕ್ಷಣೆಯಿಂದ ಏಕತ್ವವನ್ನು ಬೋಧಿಸಿತೋ, ಆ ಕಾರಣದಿಂದ ನಾನು ಬ್ರಹ್ಮವಾದೆನೆಂಬ ಅಪರೋಕ್ಷಜ್ಞಾನವುಂಟಾಯಿತು. ಇದರಿಂದ ಮಹಾವಾಕ್ಯಾರ್ಥವು ನಿಸ್ಸಂದೇಹವಾಗಿ ಗೋಚರವಾಗಿ ಫಲವಾಯಿತೆಂದು ತಾತ್ಪರ್ಯ. ॥೭॥

ಏಕಮೇವಾದ್ವಿತೀಯಂ ಸನ್ನಾಮರೂಪವಿವರ್ಜಿತಮ್ ।
ಸೃಷ್ಟೇಃ ಪುರಾಧುನಾಪ್ಯಸ್ಯ ತಾದೃಕ್ತ್ವಂ ತದಿತೀರ್ಯತೇ ॥

"ಸದೇವ ಸೋಮ್ಯೇದಮಗ್ರ ಆಸೀದೇಕಮೇವಾ ದ್ವಿತೀಯಂ" ಯೆಂಬ ಶ್ರುತಿಯಿಂದ ಸೃಷ್ಟಿಗೆ ಪೂರ್ವದಲ್ಲಿ ಸಜಾತೀಯ, ವಿಜಾತೀಯ ಸ್ವಗತ ಭೇದಗಳಿಲ್ಲದ ನಾಮರೂಪ ರಹಿತವಾದ ಯಾವ ಸದ್ವಸ್ತುವು ಪ್ರತಿಪಾದಿಸಲ್ಪಟ್ಟಿತೋ, ಆ ಸದ್ವಸ್ತುವಿಗೆ ಈಗಲೂ ಅಂದರೆ, ಸೃಷ್ಟಿಗೆ

ಅನಂತರದಲ್ಲಿಯೂ, ವಿಚಾರದೃಷ್ಟಿಯಿಂದ ಅಂತಪ್ಪ ಸ್ವಗತಾದಿಭೇದ ರಹಿತವಾದ ಸದ್ವಸ್ತುವಿನ ಸ್ವಭಾವವು [ತತ್ ಪದದ ಲಕ್ಷಣಾ ವೃತ್ತಿಯಿಂದ ಲಕ್ಷಿಸಿ ಬೋಧಿಸಲ್ಪಡುವದೆಂದು] ತಾತ್ಪರ್ಯ

**ಶ್ರೋತುರ್ದೇಹೇಂದ್ರಿಯಾತೀತಂ ವಸ್ತ್ವತ್ರತ್ವಂಪದೇರಿತಮ್ ।**
**ಏಕತಾ ಗ್ರಾಹ್ಯತೇಽಸೀತಿ ತದೈಕ್ಯಮನುಭೂಯತಾಮ್ ॥**

ವೇದಾಂತ ಶ್ರವಣ ಮನನಾದಿಗಳಿಂದ ಮಹಾವಾಕ್ಯಾರ್ಥವನ್ನು ತಿಳಿಯಲು ಬಯಸುವವನು ಮುಮುಕ್ಷುವು. ಅವನು ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಿಗೆ ಸಾಕ್ಷಿಯಾಗಿ ಅವುಗಳಿಗಿಂತಲೂ ವಿಲಕ್ಷಣವಾಗಿರುವ ಸದ್ರೂಪವಾದ ಬ್ರಹ್ಮವೇ 'ತತ್ತ್ವಮಸಿ' ಮಹಾವಾಕ್ಯದಲ್ಲಿಯ ತ್ವಂ ಪದದಿಂದ ಲಕ್ಷಿತನಾಗಿರುವನು. ಈ ಮಹಾವಾಕ್ಯದಲ್ಲಿರುವ 'ಅಸಿ' ಎಂಬ ಪದದಿಂದ ತತ್ ಮತ್ತು ತ್ವಂ ಎಂಬ ಎರಡು ಪದಗಳಿಗೆ ಸಾಮಾನಾಧಿಕರಣ್ಯ ಸಂಬಂಧವಿದೆ. ಆ ಸಂಬಂಧದಿಂದ ಪ್ರಾಪ್ತವಾಗುವ ಲಕ್ಷಣಾ ವೃತ್ತಿಯಿಂದ ಲಕ್ಷಿತವಾಗುವ ಲಕ್ಷ್ಯಾರ್ಥಗಳೆರಡಕ್ಕೂ ಐಕ್ಯವು ಮುಮುಕ್ಷುಗಳಿಂದ ಅನುಭವಿಸಲ್ಪಡಲಿ. ॥೯॥

**ಸ್ವಪ್ರಕಾಶಾಪರೋಕ್ಷತ್ವಮಯಮಿತ್ಯುಕ್ತಿತೋ ಮತಮ್ ।**
**ಅಹಂಕಾರಾದಿ ದೇಹಾಂತಾತ್ಪ್ರತ್ಯಗಾತ್ಮೇತಿ ಗೀಯತೇ ॥**

'ಅಯಂ' ಎಂಬ ಈ ಪದದಿಂದ ಆತ್ಮನಿಗೆ ಸ್ವಯಂ ಪ್ರಕಾಶತ್ವದಿಂದ ಅಪರೋಕ್ಷತ್ವವು ಇರುವುದೆಂಬ ಅರ್ಥವು ಸಮ್ಮತವಾಗಿದೆ. ಈ ಎರಡು ವಿಶೇಷಣಗಳು ಏಕೆಂದರೆ ಅದೃಷ್ಟಾದಿಗಳಂತೆ, ಆತ್ಮನಿಗೆ ನಿತ್ಯ

ಅಪರೋಕ್ಷತ್ವವಿಲ್ಲವೆಂದು ತಿಳಿಸುವದಕ್ಕೂ, ಘಟಾದಿ ಜಡಪದಾರ್ಥಗಳಂತೆ, ಆತ್ಮನಿಗೆ ದೃಶ್ಯತ್ವವಿಲ್ಲವೆಂದು ತಿಳಿಸುವದಕ್ಕೂ ಈ ಶ್ಲೋಕದಲ್ಲಿ ಸ್ವಪ್ರಕಾಶತ್ವ, ಅಪರೋಕ್ಷತ್ವಗಳೆಂಬ ಎರಡು ವಿಶೇಷಣಗಳು ಹೇಳಲ್ಪಟ್ಟಿತೆಂದು ತಿಳಿಯಬೇಕು. ಆದರೆ, ಆತ್ಮಶಬ್ದವು ದೇಹಾದಿಗಳಲ್ಲಿಯೂ ಪ್ರಯೋಗಿಸಲ್ಪಡುವುದು. ಈ ಮಹಾವಾಕ್ಯದೊಳಗುಳ್ಳ ಆತ್ಮಶಬ್ದಕ್ಕೆ ಅರ್ಥವೇನು ? ಅಂದರೆ, ಇಲ್ಲಿ ಆತ್ಮನು ಎಂದರೆ ಪ್ರತ್ಯಗಾತ್ಮನಹನು; ಅಹಂಕಾರ, ಪ್ರಾಣ, ಮನೋ, ಇಂದ್ರಿಯ, ದೇಹ, ಸಂಘಾತ, ರೂಪ ಪ್ರಪಂಚಕ್ಕಿಂತಲೂ ಒಳಗೆ ಆಧಾರತ್ವ ಸಾಕ್ಷಿತ್ವಗಳಿಂದ ವರ್ತಿಸುವ ದೆಸೆಯಿಂದ ಪ್ರತ್ಯಗಾತ್ಮನೆಂದು ಲಕ್ಷಣಾವೃತ್ತಿಯಿಂದ ಹೇಳಲ್ಪಡುವನೆಂದು ತಾತ್ಪರ್ಯ ॥೧೦॥

ದೃಶ್ಯಮಾನಸ್ಯ ಸರ್ವಸ್ಯ ಜಗತಸ್ತತ್ತ್ವಮೀರ್ಯತೇ ।
ಬ್ರಹ್ಮಶಬ್ದೇನ ತದ್ಬ್ರಹ್ಮ ಸ್ವಪ್ರಕಾಶಾತ್ಮರೂಪಕಮ್ ॥

ದೃಶ್ಯತ್ವದಿಂದ ಮಿಥ್ಯಾರೂಪವಾದ ಆಕಾಶಾದಿ ಸರ್ವಜಗತ್ತಿಗೆ ಆಧಾರವಾಗಿ ಆ ಜಗದ್ಬಾಧೆಗೆ ಅವಧಿತ್ವವಾಗಿ ಪಾರಮಾರ್ಥಿಕವಾದ ಸಚ್ಚಿದಾನಂದಲಕ್ಷಣಾವೃತ್ತಿಯಿಂದ ಹೇಳಲ್ಪಡುವದು ॥೮॥ ಅದರೆ, ಈ ಮಹಾವಾಕ್ಯಾರ್ಥ ಹೇಗೆ ? ಅಂದರೆ ॥೩॥ ಮೇಲೆ ಹೇಳಲ್ಪಟ್ಟ ಲಕ್ಷಣಯುಳ್ಳ ಯಾವ ಬ್ರಹ್ಮವುಂಟೋ ಆ ಬ್ರಹ್ಮವು ಸ್ವಪ್ರಕಾಶಮಾನವಾದ ಪ್ರತ್ಯಗಾತ್ಮನ ಸ್ವರೂಪವಾಗಿ ಉಳ್ಳದ್ದಕಾಮು. ಅಂದರೆ, ಯಾವ ಕಾರಣದಿಂದ ಬ್ರಹ್ಮವು ಸರ್ವಾಧಿಷ್ಠಾನವಾಗಿಯೂ, ವ್ಯಾಪಕ

ವಾಗಿಯೂ, ಸ್ವಯಂಪ್ರಕಾಶವಾಗಿಯೂ, ಸದಾನಂದರೂಪವಾಗಿಯೂ ಇರುವದೋ ಆ ಕಾರಣದಿಂದ ಈ ಲಕ್ಷಣದಿಂದ ಲಕ್ಷಿತವಾದ ಪ್ರತ್ಯಗಾತ್ಮನೆ ತಾನಾಗಿದೆಯೆಂದು ತಾತ್ಪರ್ಯ. ||೧೧||

**ಮಾಯಾವಿದ್ಯೇ ವಿಹಾಯೈವ ಉಪಾಧೀ ಪರಜೀವಯೋಃ ।**
**ಅಖಂಡಂ ಸಚ್ಚಿದಾನಂದಂ ಪರಂ ಬ್ರಹ್ಮ ವಿಲಕ್ಷ್ಯತೇ ॥**

ಒಂದೇ ಚೈತನ್ಯವೇ ಮಾಯೋಪಾಧಿಯಿಂದ ಈಶ್ವರನೆನಿಸಿಕೊಳ್ಳುತ್ತದೆ. ಅವನು ಸರ್ವಜ್ಞತ್ವಾದಿ ಗುಣಗಳುಳ್ಳವನಾಗಿದ್ದಾನೆ. ಅದೇ ಚೈತನ್ಯವೇ ಅವಿದ್ಯಾಉಪಾಧಿಯಿಂದ ಜೀವನೆನಿಸಿಕೊಂಡು ಕಿಂಚಿಜ್ಞನಾಗಿದ್ದಾನೆ. ಸರ್ವಜ್ಞತ್ವ, ಕಿಂಚಿಜ್ಞತ್ವಕ್ಕೂ ಜೀವೇಶ್ವರರ ಭೇದಕ್ಕೂ ಕಾರಣಗಳಾದ ಮಾಯಾ ಅವಿದ್ಯೆಗಳನ್ನು ವಿವೇಕದಿಂದ ಬಿಟ್ಟು, ಸ್ವಗತಾದಿ ಭೇದರಹಿತವಾದ ಸಚ್ಚಿದಾನಂದ ಲಕ್ಷಣಾತ್ಮಕವಾದ ಪರಬ್ರಹ್ಮವು ಲಕ್ಷಿಸಲ್ಪಡುತ್ತದೆ. ||೧೨ |

**ಹಕಾರಃ ಖೇಚರೀ ಪ್ರೋಕ್ತಸ್ತ್ವಂ ಪದಂ ಚೇತಿ ನಿಶ್ಚಿತಮ್ ।**
**ಸಕಾರಃ ಪರಮೇಶಃ ಸ್ಯಾತ್ತತ್ಪದಂಚೇತಿ ನಿಶ್ಚಿತಮ್ ।**
**ಸಕಾರೋಧ್ಯಾಯತೇ ಜಂತುರ್ಹಕಾರೋಹಿ ಭವೇದ್ಧ್ರುವಮ್ ॥**

ಬಳಿಕ ಹಂಸಮಂತ್ರದ ಸ್ವರೂಪವನ್ನು ಹೇಳುತ್ತಾರೆ.'ಹ' ಕಾರವು ಖೇಚರಿಯೆಂದು ಹೇಳಲ್ಪಟ್ಟಿದೆ.ಮತ್ತು ತ್ವಂ ಪದವೆಂದು ನಿಶ್ಚಯಿಸಲ್ಪಟ್ಟಿದೆ. 'ಸ'ಕಾರವು ಪರಮೇಶ್ವರನೆಂದೂ ಮತ್ತು ತತ್ಪದವೆಂದೂ ನಿಶ್ಚಯಿಸಲ್ಪಟ್ಟಿದೆ. ಸಕಾರ ಅರ್ಥಾತ್ ತ್ವಂ ಪದ ವಾಚ್ಯನಾದ ಜೀವನು

ಪರಮೇಶ್ವರನು ಧ್ಯಾನಿಸಲ್ಪಟ್ಟರೇ ಆ ಜೀವನು 'ಹ'ಕಾರ ಲಕ್ಷ್ಯಾರ್ಥ ಭೂತನಾದ ಪರ ಬ್ರಹ್ಮವೇ ಆಗುತ್ತಾನೆಂಬುದು ನಿಶ್ಚಯವು. ॥೧೩॥

**ನಮಸ್ತ್ವಮರ್ಥೀ ವಿಜ್ಞೇಯೋ ರಾಮಸ್ತತ್ಪದ ಮುಚ್ಯತೇ ।**
**ಅಸೀತ್ಯರ್ಥೇ ಚತುರ್ಥೀ ಸ್ಯಾದೇವಂ ಮಂತ್ರೇಷು**
**ಯೋಜಯೇತ್ ॥**

'ನಮೋ ರಾಮಾಯ' ಎಂಬ ಮಂತ್ರವು 'ತತ್ತ್ವಮಸಿ' ಎಂಬ ವಾಕ್ಯಾರ್ಥವನ್ನು ಬೋಧಿಸುತ್ತದೆಂದು ಹೇಳುತ್ತಾರೆ. ನಮಃ ಶಬ್ದವು ತ್ವಂ ಪದ ಲಕ್ಷ್ಯಾರ್ಥನಾದ ಕೂಟಸ್ಥಪ್ರತ್ಯಗಾತ್ಮನನ್ನು ಬೋಧಿಸುತ್ತದೆ, ಎಂದು ತಿಳಿಯಬೇಕು. ರಾಮ ಶಬ್ದವು ತತ್ಪದ ಲಕ್ಷ್ಯಾರ್ಥನಾದ ಬ್ರಹ್ಮ ವನ್ನು ಬೋಧಿಸುತ್ತದೆ. 'ಯ' ಎಂಬ ಚತುರ್ಥೀ ವಿಭಕ್ತಿಯು ಅಸಿ ಪದದ ಅರ್ಥವಾದ ಕೂಟಸ್ಥಬ್ರಹ್ಮರ ಏಕತ್ವವನ್ನು ಬೋಧಿಸುತ್ತದೆ ದೆಂದು ತಿಳಿಯಬೇಕು. ॥೧೪॥

**ಆದ್ಯೋ ರಾ ತತ್ಪದಾರ್ಥಃ ಸ್ಯಾನ್ಮಕಾರ ಸ್ತ್ವಂ ಪದಾರ್ಥವಾನ್ ।**
**ತಯೋಃ ಸಂಯೋಜನಮಸೀತ್ಯರ್ಥೇ ತತ್ತ್ವವಿದೋ ವಿದುಃ ॥**

ಎಂಬ ರಾಮರಹಸ್ಯೋಪನಿಷತ್ತಿನ ರೀತಿಯಾಗಿ 'ರಾ' ಎಂಬ ಅಕ್ಷರಕ್ಕೆ ತತ್ಪದ ಲಕ್ಷ್ಯಾರ್ಥವಾದ ನಿರಾಕಾರ ಪರಬ್ರಹ್ಮವು ಅರ್ಥವಾಗುತ್ತಿದೆ. ಇನ್ನು 'ಮ' ಎಂಬ ಅಕ್ಷರಕ್ಕೆ ತ್ವಂ ಪದದ ಲಕ್ಷ್ಯವಾದ ಪ್ರತ್ಯಗಾತ್ಮನೆಂಬ ಅರ್ಥವಾಗುತ್ತದೆ. ಆದ್ದರಿಂದ ರಾಮ ಎಂದರೆ ಅಂತಹ ನಿರಾಕಾರ ಪರಬ್ರಹ್ಮವೇ ಪ್ರತಿಯೊಂದು ಜೀವಜಂತುಗಳಲ್ಲಿಯೂ ಸಾಕ್ಷಿ

ಮಾತ್ರವಾಗಿ ಆತ್ಮಸ್ವರೂಪವಾಗಿಯೂ ಇರುವದೆಂದು ಬ್ರಹ್ಮಾತ್ಮರ ಅಭೇದದ ಐಕ್ಯವು ಅರ್ಥವಾಗುತ್ತಿದೆ. ಆದ್ದರಿಂದ ದೇಹತ್ರಯ ಸಾಕ್ಷಿಯಾಗಿರುವ ಆತ್ಮನೇ ರಾಮನೆಂದು ಹೇಳಲ್ಪಡುವದು ಸೌಮ್ಯನೇ ॥೧೫॥

ಕ್ಷೀರಂ ಕ್ಷೀರೇ ಯಥಾ ಕ್ಷಿಪ್ತಂ ತೈಲಂ ತೈಲೇ ಜಲಂ ಜಲೇ ।
ಸಂಯುಕ್ತಮೇಕತಾಂ ಯಾತಿ ತಥಾತ್ಮನ್ಯಾತ್ಮವಿನ್ಮುನಿಃ ॥

ಹೇಗೆ ಹಾಲಿನಲ್ಲಿ ಹಾಲು, ಎಣ್ಣೆಯಲ್ಲಿ ಎಣ್ಣೆಯು, ನೀರಿನಲ್ಲಿ ನೀರು, ಕೂಡಿಸಿದರೆ [ಹಾಕಲ್ಪಟ್ಟರೇ] ಅವು ಕೂಡಿ ಒಂದಾಗುತ್ತವೆಯೋ ಅದರಂತೆ ಆತ್ಮನನ್ನು ತಿಳಿದ ಜ್ಞಾನಿಯು ಆತ್ಮ ಸ್ವರೂಪನೇ ಆಗುತ್ತಾನೆ. ॥೧೬॥

ಘಟೇ ನಷ್ಟೇ ಯಥಾ ವ್ಯೋಮ ವ್ಯೋಮೈವ ಭವತಿ ಸ್ವಯಮ್ ।
ತಥೈವೋಪಾಧಿವಿಲಯೇ ಬ್ರಹ್ಮೈವ ಬ್ರಹ್ಮವಿತ್ಸ್ವಯಮ್ ॥

ಘಟವು ನಾಶವಾಗಲು ಹೇಗೆ ಘಟಗತವಾದ ಆಕಾಶವು ಸ್ವಯಂ [ತಾನು] ಮಹಾಕಾಶವೇ ಆಗುತ್ತದೆಯೋ, ಅದರಂತೆ ಬ್ರಹ್ಮವನ್ನು ತಿಳಿದ ಜ್ಞಾನಿಯು ಶರೀರವು ಲಯವಾಗುತ್ತಿರಲು ಆವನು ಬ್ರಹ್ಮವೇ ಆಗಿರುತ್ತಾನೆ.

## ಆರನೆಯ ಪ್ರಕರಣವು ಮುಗಿದುದು

## ಸಾಭ್ರಾಂತಿಕ ಮನನ ವಾಕ್ಯಗಳು

ಅಹಮನ್ನಮಹಮನ್ನಮಹಮನ್ನಮ್ । ಅಹಮನ್ನಾದೋಽಹಮನ್ನಾದೋಽಹಮನ್ನಾದಃ ॥

ಅದ್ವೈತಾತ್ಮ ನಿರಂಜನ ಸ್ವರೂಪವಾದ ಬ್ರಹ್ಮವನ್ನು ತಿಳಿದು ಬ್ರಹ್ಮನಾದ ಜ್ಞಾನಿಯು ಹೀಗೆ ಉದ್ಗರಿಸುತ್ತಾನೆ. ಸರ್ವ ಜೀವರಾಶಿಗಳು ತಿನ್ನುವ ಅನ್ನವು ನಾನೇ ಆಗಿದ್ದೇನೆ, ಆ ಅನ್ನವನ್ನು ತಿನ್ನುವ [ಅನ್ನಾದರಾದ] ಜೀವಿಗಳಾದವನೂ ನಾನೇ ಅಂದರೆ ಮಣ್ಣೇ ಮಡಕೆ ಕುಡಿಕೆ ಮೊದಲಾದ ರೂಪುಗಳನ್ನು ಧರಿಸಿದಂತೆ ಆತ್ಮನಾದ ನಾನೇ ಅನ್ನ ಅನ್ನಾದರೂಪನಾಗಿದ್ದೇನೆ ॥೧॥

ಅಹಂ ಮನುರಭವಂ ಸೂರ್ಯಶ್ಚ ಅಹಮೇವೇದಂ ಸರ್ವಮಸ್ಮಿ ಯಥಾ ಫೇನತರಂಗಾದಿ ಸಮುದ್ರಾದುತ್ಥಿತಂ ಪುನಃ । ಸಮುದ್ರೇ ಲೀಯತೇ ತದ್ವಜ್ಜಗನ್ಮಯ್ಯನುಲೀಯತೇ ॥

ತಾಯಿಯ ಗರ್ಭದಿಂದ ಹೊರಬರುವಾಗ ವಾಮದೇವನಿಗೆ ಸ್ವಸ್ವರೂಪಜ್ಞಾನವಾಯಿತು. ಆಗ ಅವನು ಹೀಗೆ ಹೇಳಿದನು. ನಾನು ಆದಿಮನುಮಹರ್ಷಿಯಾಗಿದ್ದೆನು. ಅಂದರೆ ಸಕಲ ಮಾನವರ ರೂಪದಿಂದ ನಾನೇ ಇರುತ್ತೇನೆ. [ಇದ್ದೇನೆ] ನಾನೇ ದೇವನಾದ ಸೂರ್ಯನಾಗಿದ್ದೇನೆ. ಅಂದರೆ ನಾನೇ ದೇವತೆಗಳ ರೂಪದಲ್ಲಿದ್ದೇನೆ. ಬಹಳ ಹೇಳುವುದರಿಂದೇನು, ನಾನೇ ಈ ಸಕಲ ರೂಪದಿಂದಿದ್ದೇನೆ.

ಹೇಗೆ ಸಮುದ್ರದಲ್ಲಿ ತೋರಿದ ನೊರೆ ಗುರುಳೆ, ತರಂಗಗಳು ಪುನಃ ಸಮುದ್ರದಲ್ಲಿ ಲೀನವಾಗುತ್ತವೆಯೋ ಅದರಂತೆ ಈ ನಾನಾರೂಪಾತ್ಮಕವಾದ ಜಗತ್ತು ನನ್ನ ಸ್ವರೂಪವಾದ ಬ್ರಹ್ಮದಲ್ಲಿ ಲಯವಾಗುತ್ತದೆ. ॥೨॥

ಅನಾತ್ಮ ದೃಷ್ಟೇರವಿವೇಕ ನಿದ್ರಾಮಹಂ ಮಮಸ್ವಪ್ನಗತಿಂಗ, ತೋಽಹಮ್ । ಸ್ವರೂಪಸೂರ್ಯೋಽಭ್ಯುದಿತೇ ಸ್ಫುಟೋಕ್ತ್ಯೈ ಗುರೋರ್ಮಹಾವಾಕ್ಯಪದೈಃ ಪ್ರಬುದ್ಧಃ ॥

ದೇಹಾದಿ ಅನಾತ್ಮಗಳೇ ನಾನೆಂಬ ದೃಷ್ಟಿಯಿಂದ ಏನೊಂದು ತಿಳಿಯದ ಅವಿವೇಕ ನಿದ್ರೆಯಲ್ಲಿದ್ದೇವೆ. ಅಲ್ಲಿ ನಾನು ನನ್ನದೆಂಬ ಸ್ವಪ್ನ ಗತಿಯನ್ನು ಹೊಂದಿದ್ದೇನೆ. ಬಳಿಕ ಶ್ರುತಿಯುಕ್ತಿ ಸ್ವಾನುಭವಗಳಿಂದ ಕೂಡಿದ ಶ್ರೋತ್ರಿಯ ಬ್ರಹ್ಮನಿಷ್ಠ ಸದ್ಗುರುವಿನಿಂದ ಉಪದೇಶಿಸಲ್ಪಟ್ಟ ಮಹಾವಾಕ್ಯಗಳಿಂದ ನಾನೇ ಬ್ರಹ್ಮನೆಂಬ ಜ್ಞಾನ ಸೂರ್ಯನು ಉದಯವಾಗುತ್ತಿರಲು ಎಚ್ಚರಗೊಂಡೆನು. [ಜಾಗ್ರತನಾದೆನು] ॥೩॥

ಕ್ಷುತ್ಪಿಪಾಸಾಂಧ್ಯಬಾಧಿರ್ಯಕಾಮಕ್ರೋಧಾದಯೋಽಖಿಲಾಃ । ಲಿಂಗದೇಹಗತಾ ಹ್ಯೇತೇ ಹ್ಯಲಿಂಗಸ್ಯ ನ ವಿದ್ಯತೇ ॥

ಹಸಿವು ನೀರಡಿಕೆಗಳು, ಕುರುಡುತನ, ಕಿವುಡುತನಗಳು, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳು, ಈ ಎಲ್ಲ ಧರ್ಮಗಳು ಹದಿನೇಳು ತತ್ವಾತ್ಮಕವಾದ

ಸೂಕ್ಷ್ಮದೇಹಕ್ಕೆ ಸೇರಿದವುಗಳು. ಆ ಲಿಂಗಶರೀರ ರಹಿತನಾದ ನನಗೆ ಮೇಲೆ ಹೇಳಿದ ಧರ್ಮಗಳಲ್ಲಿ ಒಂದೂ ಧರ್ಮವಿಲ್ಲವು. ॥೩॥

**ಚಿದ್ರೂಪತ್ವಾನ್ನ ಮೇ ಜಾಡ್ಯಂ ಸತ್ಯತ್ವಾನ್ನಾನೃತಂ ಮಮ ।**
**ಆನಂದತ್ವಾನ್ನ ಮೇ ದುಃಖಮಜ್ಞಾನಾದ್ಭಾತಿ ಸತ್ಯವತ್ ॥**

ನಾನು ಚಿದ್ರೂಪನಾದ್ದರಿಂದ ನನಗೆ ಜಡತ್ವವಿಲ್ಲವು ತ್ರಿಕಾಲಾಬಾಧ್ಯನಾದ ಸದ್ರೂಪನಾದ್ದರಿಂದ ನನಗೆ ಸುಳ್ಳಿನ ಸಂಬಂಧವಿಲ್ಲ. ಆನಂದ ಘನನಾದ್ದರಿಂದ ನನಗೆ ದುಃಖವಿಲ್ಲ. ಅಂದರೆ ಚಿದ್ರೂಪ, ಸದ್ರೂಪ, ಆನಂದರೂಪನಾದ ನನಗೆ ಜಡವಾದ, ಮಿಥ್ಯೆಯಾದ, ದುಃಖರೂಪವಾದ ದೇಹ ಮತ್ತು ದೇಹಧರ್ಮಗಳು ಇಲ್ಲ. ವಸ್ತುತಃ ಹೀಗಿದ್ದರೂ ನನ್ನ ಸ್ವಸ್ವರೂಪಜ್ಞಾನವಿಲ್ಲದ್ದರಿಂದ ದುಃಖವು ನನ್ನಲ್ಲಿ ಸತ್ಯವಾಗಿರುವಂತೆ ಕಾಣುತ್ತಿದೆ. ॥೫॥

**ನಾಹಂ ದೇಹೋ ಜನ್ಮಮೃತ್ಯೂಕುತೋಮೇ ನಾಹಂ ಪ್ರಾಣಃ ಕ್ಷುತ್ಪಿಪಾಸೇ ಕುತೋಮೇ । ನಾಹಂ ಚೇತಃ ಶೋಕಮೋಹೌ ಕುತೋ ಮೇ ನಾಹಂ ಕರ್ತಾ ಬಂಧಮೋಕ್ಷೌ ಕುತೋ ಮೇ ॥**

ಬಳಿಕ ಆತ್ಮನು ಷಡೂರ್ಮಿಗಳಿಂದರಹಿತನಾಗಿದ್ದಾನೆಂದು ಹೇಳುತ್ತಾರೆ. ನಾನು ದೇಹವಲ್ಲ ಆದ್ದರಿಂದ ನನಗೆ ಹುಟ್ಟುಸಾವು ಗಳೆಲ್ಲಿಯವು? ನಾನು ಪ್ರಾಣನಲ್ಲ ಆದ್ದರಿಂದ ನನಗೆ ಹಸಿವು ನೀರಡಿಕೆಗಳೆಲ್ಲಿವೇ ? ನಾನು ಬುದ್ಧಿಯಲ್ಲ. ಆದ್ದರಿಂದ ನನಗೆ ಶೋಕ ಮೋಹಗಳೆಲ್ಲಿವ? ನಾನು ಮಾಡುವವನಲ್ಲ. ಆದ್ದರಿಂದ ನನಗೆ ಬಂಧಮೋಕ್ಷಗಳೆಲ್ಲಿವೇ ? ॥೬॥

**ಆನಂದಮಂತರ್ನಿಜ ಮಾಶ್ರಯಂತಮಾಶಾಪಿಶಾಚೀಮವಮಾನ
ಯಂತಮ್ । ಆಲೋಕಯಂತಂ ಜಗದಿಂದ್ರಜಾಲಮಾಪತ್ಕಥಂ
ಮಾಂ ಪ್ರವಿಶೇದಸಂಗಮ್ ॥**

ತನ್ನ ಅಂತರಾತ್ಮನ ಆನಂದವನ್ನು ಆಶ್ರಯಿಸಿರುವ, ಆಶೆಯೆಂಬ ಪಿಶಾಚಿಯನ್ನು ಅವಮಾನಗೊಳಿಸುವ, ನಾಮರೂಪಾತ್ಮಕವಾದ ಪ್ರಪಂಚವನ್ನು ಇಂದ್ರಜಾಲ ಪದಾರ್ಥಗಳಂತೆ ಮಿಥ್ಯೆಯೆಂದು ನೋಡುತ್ತಿರುವ, ಅಸಂಗನಾದ ನನಗೆ ಜನನ ಮರಣಗಳೆಂಬ ಆಪತ್ತುಗಳು ಹೇಗೆ ಒಂದಾವು? ॥೭॥

**ದೇವಾರ್ಚನಸ್ನಾನ ಶೌಚಭಿಕ್ಷಾದೌ ವರ್ತತಾಂ ವಪುಃ ।
ತಾರಂ ಜಪತು ವಾಕ್ತದ್ವತ್ಪಠತ್ವಾಮ್ನಾಯಮಸ್ತಕಮ್ ।**

ಶರೀರವು ದೇವತೆಗಳನ್ನು ಪೂಜಿಸುವುದರಲ್ಲಿಯೂ ಸ್ನಾನ, ಶೌಚ, ಭಿಕ್ಷಾ, ಭೋಜನಾದಿಗಳಲ್ಲಿ ತೊಡಗಿರಲಿ ವಾಣಿಯು ಮಂತ್ರವನ್ನು ಸ್ಪಷ್ಟವಾಗಿ ಜಪಿಸಲಿ, ಅದರಂತೆ ವೇದ ಶಿಖೆಯಾದ ಈಶಾದಿ ಉಪನಿಷತ್ತುಗಳನ್ನು ಓದಲಿ, ಅರ್ಥಾತ್ ಶರೀರ ವಾಣಿಗಳೆರಡು ದೇವತಾರ್ಚನೆ ಮಂತ್ರೋಚ್ಚಾರಣೆ ವೇದ ಪಠನಗಳಲ್ಲಿ ಯಾವಾಗಲೂ ಆಸಕ್ತವಾಗಿರಲಿ ಎಂಬ ಭಾವವು. ॥೮॥

**ವಿಷ್ಣುಂ ಧ್ಯಾಯೇತ ಧೀರ್ಯದ್ವಾ ಬ್ರಹ್ಮಾನಂದೇ ವಿಲೀಯ
ತಾಮ್ ।**

ಬುದ್ಧಿಯು ಜಗದ್ರಕ್ಷಕನಾದ ಶ್ರೀ ಮಹಾವಿಷ್ಣುವನ್ನು ಧ್ಯಾನಿಸಲಿ ಅಥವಾ ಬ್ರಹ್ಮವನ್ನರಿತು ಬ್ರಹ್ಮಾನಂದದಲ್ಲಿ ಲಯವಾಗಲಿ. ॥೯॥

ಸಾಕ್ಷ್ಯಹಂ ಕಿಂಚಿದಪ್ಯತ್ರ ನ ಕುರ್ವೇ ನಾಪಿಕಾರಯೇ ।
ಜ್ಞಾತಂ ಜ್ಞಾತವ್ಯಮಧುನಾ ದೃಷ್ಟಂ ದ್ರಷ್ಟವ್ಯಮದ್ಭುತಮ್ ॥

ಅವಸ್ಥಾತ್ರಯ ಸಾಕ್ಷಿಯಾದ ನಾನು ಈ ಜಗತ್ತಿನಲ್ಲಿ ಯಾವ ಕರ್ಮವನ್ನು ಮಾಡುವದಿಲ್ಲ, ಮಾಡಿಸುವವುದೂ ಇಲ್ಲ. ಈಗ ತಿಳಿಯಲ್ಪಡಬೇಕಾದದ್ದು ತಿಳಿಯಲ್ಪಟ್ಟಿತು. ನೋಡಲ್ಪಡಬೇಕಾದ ಅದ್ಭುತವು ನೋಡಲ್ಪಟ್ಟಿತು. ॥೧೦॥

ವಿಶ್ರಾಂತೋಽಸ್ಮಿ ಚಿರಂ ಶ್ರಾಂತಶ್ಚಿನ್ಮಾತ್ರಾನ್ನಾಸ್ತಿ ಕಿಂಚನ ।
ನ ಭೂತಂ ನ ಭವಿಷ್ಯಂ ಚ ಚಿಂತಯಾಮಿ ಕದಾಚನ ॥

ದಣಿದ ನಾನು ಬಹಳ ಕಾಲದಿಂದ ವಿಶ್ರಾಂತನಾಗಿದ್ದೇನೆ. ಅರುವನ್ನು ಬಿಟ್ಟು ಬೇರೆ ಏನೂ ಯಾವುದೂ ಇರುವುದಿಲ್ಲ. ನಾನು ಎಂದೂ ಹಿಂದಿನದನ್ನು ಮತ್ತು ಮುಂದಾಗುವದನ್ನು ಚೀತಿಸುವುದಿಲ್ಲ. ॥೧೧॥

ನ ಸ್ತೌಮಿ ನ ಚ ನಿಂದಾಮಿ ಹ್ಯಾತ್ಮನೋಽನ್ಯನ್ನಹಿ ಕ್ವಚಿತ್ ।
ಅಲೇಪಕೋಽಹಮಜರೋ ನೀರಾಗಃ ಶಾಂತ ವಾಸನಃ ॥

ಬ್ರಹ್ಮಸ್ವರೂಪವಾದ ನನ್ನ ಆತ್ಮನಿಗಿಂತಲೂ ಬೇರೆಯಾಗಿ ಯಾವ ಪದಾರ್ಥವೂ ಎಲ್ಲಿಯೂ ಇಲ್ಲದ್ದರಿಂದ ಯಾರನ್ನೂ ಹೊಗಳುವದಿಲ್ಲ. ಮತ್ತು ನಿಂದಿಸುವದಿಲ್ಲ ನಾನು ಕಮಲಪತ್ರದಂತೆ ಪುಣ್ಯ ಪಾಪಗಳ

ಲೇಪವಿಲ್ಲದವನು. ಮುಚ್ಚಿಲ್ಲದವನು ಆಶಾರಹಿತನು. ಲೌಕಿಕಾದಿ ವಾಸನಾ ರಹಿತನು ಆಗಿದ್ದನೆ. ॥೧೨॥

ಸ್ವಪೂರ್ಣಾತ್ಮಾತಿರೇಕೇಣ ಜಗಜ್ಜೀವೇಶ್ವರಾದಾಯಃ ।
ನ ಸಂತಿ ನಾಸ್ತಿ ಮಾಯಾ ಚ ತೇಭ್ಯಶ್ಚಾಹಂ ವಿಲಕ್ಷಣಃ ॥

ಆಕಾಶದಂತೆ ಪರಿಪೂರ್ಣವಾದ ನನ್ನ ಆತ್ಮನಿಗಿಂತಲೂ ಬೇರೆಯಾಗಿ ಜಗತ್ತು ಜೀವರುಗಳು ಮತ್ತು ಈಶ್ವರ ಮೊದಲಾದವರು ಇರುವುದಿಲ್ಲ. ಜಗದಾದಿಗಳಿಗೆ ಪರಿಣಾಮ್ಯುಪಾದಾನ ಕಾರಣವಾದ ಮಾಯೆಯೂ ಇಲ್ಲ. ಆದ್ದರಿಂದ ಜಗತ್ತು, ಜೀವ, ಈಶ್ವರ ಮತ್ತು ಮಾಯೆಗಳಿಗಿಂತಲೂ ನಾನು ವಿಲಕ್ಷಣನಾಗಿದ್ದೇನೆ. ಹೇಗೆ ಹಗ್ಗದಲ್ಲಿ ತೋರುವ ಭ್ರಮಾತ್ಮಕವಾದ ಹಾವು, ಭೂಮಿಯ ಬಿರುಕು, ದಂಡ, ಮೊದಲಾದವುಗಳು ಹಗ್ಗದಲ್ಲಿ ಮೂರು ಕಾಲದಲ್ಲಿಯೂ ಇಲ್ಲವೋ, ಮತ್ತು ಹಗ್ಗವು ಆ ಭ್ರಾಂತಿವಸ್ತುಗಳಿಗಿಂತ ವಿಲಕ್ಷಣವಾಗಿದೆಯೋ, ಅದರಂತೆ ಜಗತ್ತು, ಜೀವ, ಈಶ್ವರ ಮತ್ತು ಮಾಯೆಗಳಿಗಿಂತಲೂ ವಿಲಕ್ಷಣನಾಗಿದ್ದೇನೆ. ॥೧೩॥

ಕಿಂ ಕರೋಮಿ ಕ್ವ ಗಚ್ಛಾಮಿ ಕಿಂ ಗೃಹ್ಣಾಮಿ ತ್ಯಜಾಮಿ ಕಿಮ್ ।
ಯನ್ಮಯಾ ಪೂರಿತಂ ವಿಶ್ವಂ ಮಹಾಕಲ್ಪಾಂಬುನಾ ಯಥಾ ॥

ಜಗದುತ್ಪತ್ತಿಗಿಂತ ಪೂರ್ವದಲ್ಲಿ ಜಗತ್ತು ನೀರಿನಿಂದ ವ್ಯಾಪ್ತವಾಗಿರುವಂತೆ, ಸಚ್ಚಿದಾನಂದ ಲಕ್ಷಣಾತ್ಮಕವಾದ ನನ್ನಿಂದ ಜಗತ್ತು ತುಂಬಲ್ಪಟ್ಟಿದೆ. ಅರ್ಥಾತ್ ನನಗಿಂತಲೂ ಬೇರೆಯಾಗಿ ಯಾವುದೂ ಇಲ್ಲ.

ಆದ್ದರಿಂದ ಏನನ್ನೂ ಮಾಡಲಿ? ಎಲ್ಲಿಗೆ ಹೋಗಲಿ? ಏನನ್ನು ತೆಗೆದು ಕೊಳ್ಳಲಿ? ಮತ್ತು ಏನನ್ನು ಬಿಡಲಿ? ನನಗೆ ಮಾಡುವುದಕ್ಕೆ ಕೈಗಳಿಲ್ಲ. ಆದ್ದರಿಂದ ಯಾವ ಕರ್ಮಗಳನ್ನೂ ಮಾಡುವುದಿಲ್ಲ, ಕಾಲುಗಳಿಲ್ಲದ್ದ ರಿಂದ ಎಲ್ಲಿಯೂ ಗಮನ ಮಾಡುವುದಿಲ್ಲ. ತೆಗೆದುಕೊಳ್ಳಲಿಕ್ಕೆ ಮತ್ತು ಬಿಡುವುದಕ್ಕೆ ನನಗಿಂತ ಬೇರಾವುದೂ ಇಲ್ಲದ್ದರಿಂದ ನಾನು ಯಾವು ದನ್ನೂ ತೆಗೆದುಕೊಳ್ಳುವದಿಲ್ಲ, ಬಿಡುವುದಿಲ್ಲ. ॥೧೪॥

ಇತಿ ಮನನ ವಾಕ್ಯಗಳು ಏಳನೇ ಪ್ರಕರಣವು ಮುಗಿದುದು

## ಜೀವನ್ಮುಕ್ತನ ಸ್ವರೂಪವನ್ನು ಬೋಧಿಸುವ ವಾಕ್ಯಗಳು

ಸ ತತ್ರ ಪರ್ಯೇತಿ ಜಕ್ಷನ್ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ । ಯಾನೈರ್ವಾ ಜ್ಞಾತಿಭಿರ್ವಾನವಯಸ್ಮೈರ್ವಾ ನೋಪಜನಂ ಸ್ಮರ ನ್ನಿದಂ ಶರೀರಮ್ ॥

ಜ್ಞಾನಿಯು ಜೀವನ್ಮುಕ್ತಾವಸ್ಥೆಯಲ್ಲಿ ಪ್ರಪಂಚದಲ್ಲಿ ತಿನ್ನುತ್ತಾ ಆಡುತ್ತಾ ಸ್ತ್ರೀಯರೊಡನಾಗಲೀ ವಾಹನಗಳೊಡನಾಗಲೀ ಬಂಧು ಗಳೊಡನಾಗಲೀ, ಸ್ನೇಹಿತರೊಡನಾಗಲೀ, ಕ್ರೀಡಿಸುತ್ತಾ ಯಾವ ವಿಕಾರವನ್ನೂ ಪಡೆಯುವುದಿಲ್ಲಾ. ಜನರ ಸಮೀಪದಲ್ಲಿ ಇರುವ ಈ ಶರೀರವನ್ನೂ ಸ್ಮರಿಸುವುದಿಲ್ಲಾ. ॥೧॥

ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾನನ್ನಾತ್ಮರತಿರಾತ್ಮಕ್ರೀಡ ಆತ್ಮಮಿಥುನ ಆತ್ಮಾನಂದಃ ಸ ಸ್ವರಾಡ್ ಭವತಿ ॥

ಅಂತಹ ಈ ಜೀವನ್ಮುಕ್ತನು ಎಲ್ಲಾ ಕಡೆಯಲ್ಲಿಯೂ ಬ್ರಹ್ಮವನ್ನೇ ನೋಡುತ್ತಾ, ಬ್ರಹ್ಮಕ್ಕಿಂತಲೂ ತಾನು ಬೇರೆಯಲ್ಲವೆಂದು ತಿಳಿದು ಆತ್ಮನಲ್ಲಿಯೇ ಪ್ರೀತಿಯುಳ್ಳವನಾಗಿ ಆತ್ಮನಲ್ಲಿಯೇ ಕ್ರೀಡೆಯುಳ್ಳವನಾಗಿ, ಆತ್ಮನಲ್ಲಿಯೇ ಸಮರಸವುಳ್ಳವನಾಗಿ, ಮತ್ತು ಆತ್ಮನ ಆನಂದವನ್ನನುಭವಿಸುವವನಾದ ಅವನು ಮುಕ್ತನಾಗುತ್ತಾನೆ. ॥೨॥

ತೇ ದೇವಾಃ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ಸಸಾಧನೇಭ್ಯೋ ವ್ಯುತ್ಥಾಯ ನಿರಾಗಾರಾ ನಿಷ್ಪರಿಗ್ರಹಾ ಅಶಿಖಾ ಅಯಜ್ಞೋಪವೀತಾ ಅಂಧಾ ಬಧಿರಾ ಮುಗ್ಧಾಃ ಕ್ಲೀಬಾ ಮೂಕಾ ಉನ್ಮತ್ತಾ ಇವ ಪರಿವರ್ತಮಾನಾಃ ಶಾಂತಾ ದಾಂತಾ ಉಪರತಾಸ್ತಿತಿಕ್ಷವಃ ।

ಮಡದಿಯೆಂಬ ಈಷಣದಿಂದಲೂ, ಹಣವೆಂಬ ಈಷಣದಿಂದಲೂ, ಮತ್ತು ಲೋಕದಲ್ಲಿರುವ ಎಲ್ಲಾ ಜನರು ನನ್ನನ್ನು ಪೂಜಿಸಬೇಕೆಂಬ ಲೋಕೇಷಣದಿಂದಲೂ, ಮತ್ತು ಅವುಗಳ ಸಾಧನಗಳಿಂದಲೂ ನಿವೃತ್ತರಾಗಿ [ವಿರಕ್ತರಾಗಿ] ಬೇರೆ ಯಾವ ವಿಷಯದಲ್ಲಿಯೂ, ಪ್ರೀತಿಯಿಲ್ಲದವರಾಗಿ, ಯಾರಾದರೂ ಏನಾದರೂ ಕೊಟ್ಟರೆ ತೆಗೆದುಕೊಳ್ಳದವರಾಗಿ, ಶಿಖಾ ಮತ್ತು ಯಜ್ಞೋಪವೀತವಿಲ್ಲದವರಾಗಿ, ಅಂತರಿಂದ್ರಿಯ ಮತ್ತು

ಬಹಿರೀಂದ್ರಿಯ ನಿಗ್ರಹವುಳ್ಳವರಾಗಿ, ಬಿಟ್ಟ ವಿಷಯವನ್ನು ಪುನಃ ಸ್ಮರಿಸದ ಉಪರತಿಯುಳ್ಳವರಾಗಿ ಮತ್ತು ಶೀತೋಷ್ಣಗಳನ್ನು ಸಹಿಸುವವರಾದ ಅವರೇ [ಮೇಲೆ ಹೇಳಿದ ಲಕ್ಷಣದಿಂದ ಕೂಡಿದವರೇ] ದೇವತೆಗಳು, ಇವರು ಲೋಕದಲ್ಲಿ ಕುರುಡರಂತೆ, ಕಿವುಡರಂತೆ, ಹುಚ್ಚರಂತೆ, ನಪುಂಸಕರಂತೆ, ಮೂಕರಂತೆ ಮತ್ತು ಸುರಾಪಾನಮತ್ತರಂತೆ ಸಂಚರಿಸುತ್ತಾರೆ. ॥೩॥

**ಸಮಾಹಿತಾ ಆತ್ಮರತಯ ಆತ್ಮಕ್ರೀಡಾ ಆತ್ಮಮಿಥುನಾ ಆತ್ಮಾನಂದಾಃ ಪ್ರಣವಮೇವ ಪರಂ ಬ್ರಹ್ಮಾತ್ಮ ಪ್ರಕಾಶಂ ಶೂನ್ಯಂ ಜಾನಂತಸ್ತತ್ರೈವ ಪರಿಸಮಾಪ್ತಾಃ॥**

ನಿರ್ಮಲ ಮತ್ತು ನಿಶ್ಚಲ ಚಿತ್ತವುಳ್ಳವರಾಗಿರುತ್ತಾರೆ. ಅವರು ಆತ್ಮನಲ್ಲಿಯೇ ಪ್ರೀತಿಯುಳ್ಳವರು, ಆತ್ಮನಲ್ಲಿಯೇ ಆಡುವವರು, ಆತ್ಮನಲ್ಲಿಯೇ ಸೇರುವವರು ಮತ್ತು ಆತ್ಮನ ಆನಂದವನ್ನು ಅನುಭವಿಸುವವರಾದ ಅವರು ಓಂಕಾರವೇ ಪರಬ್ರಹ್ಮದ ವಾಚಕವಾಗಿದೆಯೆಂದು ಪರಬ್ರಹ್ಮವನ್ನು ತಿಳಿದು ಅಲ್ಲಿಯೇ ಲಯ ಹೊಂದುತ್ತಾರೆ. ॥೪॥

**ಕುಟೀಲೋsಸಹಾಯ ಏಕಾಕೀ ಸಮಾಧಿಸ್ಥ ಆತ್ಮಕಾಮ ಆಪ್ತಕಾಮೋ ನಿಷ್ಕಾಮೋ ಜೀರ್ಣಕಾಮೋ ಹಸ್ತಿನಿ ಸಿಂಹೇ ದಂಶೇ ಮಶಕೇ ನಕುಲೇ ಸರ್ಪರಾಕ್ಷಸಗಂಧರ್ವೇಷು ಮೃತ್ಯೋರೂಪಾಣಿ ವಿದಿತ್ವಾ ನ ಬಿಭೇತಿ ಕುತಶ್ಚನೇತಿ ॥**

ನೂರಾರು ಕಡೆ ಹರಿದು ಹೋದ ಬಟ್ಟೆಯನ್ನು ಉಟ್ಟಿರುವನಾಗಿ, ಯಾರ ಸಹಾಯವೂ ಇಲ್ಲದೆ ಕಾಮನಾರಹಿತನಾಗಿ, ಸಂಪೂರ್ಣವಾಗಿ, ನಾಶಿಸಲ್ಪಟ್ಟ ಕಾಮನೆಯುಳ್ಳವನಾಗಿ ಆನೆಯಲ್ಲಿ, ಸಿಂಹದಲ್ಲಿ ಚೇಳು, ಸೊಳ್ಳೆ ಮುಂತಾದ ಕಚ್ಚುವ ಪ್ರಾಣಿಗಳಲ್ಲಿಯೂ ಮುಂಗುಸಿಯಲ್ಲಿಯೂ, ಹಾವು, ರಾಕ್ಷಸ ಮತ್ತು ಗಂಧರ್ವರಲ್ಲಿಯೂ, ಇವುಗಳ ಘೋರ ರೂಪವನ್ನು ನೋಡಿಯೂ ಕೂಡ ಯಾವುದರಿಂದಲೂ ಹೆದರುವುದಿಲ್ಲ. ॥೫॥

ಸರ್ವಧರ್ಮಾನ್ಪರಿತ್ಯಜ್ಯ ನಿರ್ಮಮೋ ನಿರಹಂಕಾರೋ ಭೂತ್ವಾ ಬ್ರಹ್ಮಿಷ್ಠಂ ಶರಣಮುಪಗಮ್ಯ ತತ್ತ್ವಮಸಿ ಸರ್ವಂ ಖಲ್ವಿದಂ ಬ್ರಹ್ಮ ನೇಹ ನಾನಾಸ್ತಿ ಕಿಂಚನೇತ್ಯಾದಿಮಹಾವಾಕ್ಯಾರ್ಥಾನುಭವ ಜ್ಞಾನಾದ್ಬ್ರಹ್ಮೈವಾಹಮಸ್ಮೀತಿ ನಿಶ್ಚಿತ್ಯ ನಿರ್ವಿಕಲ್ಪಕಸಮಾಧಿನಾ ಸ್ವತಂತ್ರೋ ಯತಿಶ್ಚರತಿ ಸ ಸಂನ್ಯಾಸೀ ಸ ಮುಕ್ತಃ ಸ ಪೂಜ್ಯಃ ಸ ಯೋಗೀ ಸ ಪರಮಹಂಸಃ ಸೋಽವಧೂತಃ ಸ ಬ್ರಾಹ್ಮಣ ಇತಿ ಜೀವಃ ಪಂಚವಿಂಶಕಃ ಸ್ವಕಲ್ಪಿತಚತುರ್ವಿಂಶತಿ ತತ್ತ್ವಂ ಪರಿತ್ಯಜ್ಯ ಷಡ್ವಿಂಶಕಪರಮಾತ್ಮಾಹಮಿತಿ ನಿಶ್ಚಯಾಜ್ಜೀವನ್ಮುಕ್ತೋ ಭವತಿ ॥

ದೇಹ ಮೊದಲಾದ ಅನಾತ್ಮಗಳ ಧರ್ಮಗಳನ್ನು ಬಿಟ್ಟು ಮನೆ, ಮಠ ಮುಂತಾದವುಗಳಲ್ಲಿ ನನ್ನದೆಂಬ ಭಾವನೆಯಿಲ್ಲದವನಾದ ಮತ್ತು ನಾನೆಂಬ ಅಹಂಕಾರ ಭಾವನೆಯಿಲ್ಲದವನಾದ ಮುಮುಕ್ಷುವು ಶ್ರೋತ್ರಿ–

ಯ ಬ್ರಹ್ಮನಿಷ್ಠ ಸದ್ಗುರುಗಳನ್ನು ಕುರಿತು ಶರಣು ಹೋಗಿ ಅವರಲ್ಲಿ ಆಪ್ತಾದಿ ಚತುರ್ವಿಧ ಸೇವೆಗಳನ್ನು ಮಾಡುತ್ತಾ ನೀನೇ ಬ್ರಹ್ಮನಿರುವೇ ಎಂದು ಬೋಧಿಸುವ ತತ್ತ್ವಮಸಿ 'ಸರ್ವಂ ಖಲ್ವಿದಂ ಬ್ರಹ್ಮ' ಮತ್ತು ಚೇತನವಾದ ಬ್ರಹ್ಮನಲ್ಲಿ ಸ್ವಲ್ಪವೂ ಕೂಡ ಭೇದವಿಲ್ಲವೆಂದು ಬೋಧಿಸುವ 'ನೇಹನಾನಾಸ್ತಿ ಕಿಂಚನ' ಇವೇ ಮೊದಲಾದ ಮಹಾವಾಕ್ಯಗಳ ಅರ್ಥವನ್ನು ಸ್ವಾನುಭವಗೊಳಿಸುತ್ತಾ [ತನ್ನನುಭವಕ್ಕೆ ತಂದುಕೊಳ್ಳುತ್ತಾ] 'ಬ್ರಹ್ಮವೇ ನಾನಿದ್ದೇನೆ.' ಎಂದು ನಿಶ್ಚಯಿಸಿ ಯಾವ ಯತಿಯು ನಿರ್ವಿಕಲ್ಪ ಸಮಾಧಿಯಿಂದ ಸ್ವತಂತ್ರವಾಗಿ ಸಂಚರಿಸುತ್ತಾನೆಯೋ, ಅವನೇ ಸಂನ್ಯಾಸಿಯು, ಮುಕ್ತನು, ಪೂಜ್ಯನು, ಆ ಯೋಗಿಯೇ ಪರಮ ಹಂಸನು. ಅವನೇ ಅವಧೂತನು, ಅವನೇ ಬ್ರಾಹ್ಮಣನು. ಹೀಗೆಂದು ತನ್ನ ಸಂಕಲ್ಪದಿಂದ ಕಲ್ಪಿಸಲ್ಪಟ್ಟ ಜೀವಸಹಿತ ಇಪ್ಪತ್ತೈದು ತತ್ತ್ವಗಳೊಳಗೆ ೨೪ ತತ್ತ್ವಗಳನ್ನು ಅನಾತ್ಮಗಳೆಂದು ನೇತಿಗಳೆದು ಇಪ್ಪತ್ತಾರನೇ ತತ್ತ್ವವಾದ ಪರಬ್ರಹ್ಮನೇ ನಾನೆಂಬ ನಿಶ್ಚಯದಿಂದ ಜೀವನ್ಮುಕ್ತನಾಗುತ್ತಾನೆ. ॥೬॥

**ತುರೀಯಮಕ್ಷರಮಿತಿ ಜ್ಞಾತ್ವಾ ಜಾಗರಿತೇ ಸುಷುಪ್ತ್ಯವಸ್ಥಾಪನ್ನ ಇವ ಯದ್ಯಚ್ಛ್ರುತಂ ಯದ್ಯದೃಷ್ಟಂ ತತ್ಸರ್ವಮವಿಜ್ಞಾತಮಿವ ಯೋ ವಸೇತ್ತಸ್ಯ ಸ್ವಪ್ನಾವಸ್ಥಾಯಾಮಪಿ ತಾದೃಗವಸ್ಥಾ ಭವತಿ ಸ ಜೀವನ್ಮುಕ್ತೋ ಭವತಿ ॥**

ಜ್ಞಾನ ಸಾಧ್ಯವಾದ ನಾಲ್ಕನೆಯ ಅವಸ್ಥೆಯನ್ನು ನಾಶರಹಿತ

ವಾದ ಬ್ರಹ್ಮವನ್ನಾಗಿ ತಿಳಿದು ಎಚ್ಚರದಲ್ಲಿಯೇ ನಿದ್ರೆಯನ್ನು ಹೊಂದಿ ದವನಂತೆ ಯಾವ ಯಾವದನ್ನು ಕೇಳುತ್ತಾನೆಯೋ, ಯಾವ ಯಾವ ದನ್ನು ನೋಡುತ್ತಾನೆಯೋ ಆ ಎಲ್ಲವನ್ನೂ ತಿಳಿಯದವನಂತೆ ಯಾವನು ವಾಸಿಸುತ್ತಾನೆಯೋ, ಮತ್ತು ಯಾವನಿಗೆ ಕನಸಿನಲ್ಲಿಯೂ ಸಹ ಆ ರೀತಿಯಾದ ಅವಸ್ಥೆಯು [ಜೀವನ್ಮುಕ್ತ] ಉಂಟಾಗುತ್ತದೆಯೋ ಅವನೇ ಜೀವನ್ಮುಕ್ತನಾಗುತ್ತಾನೆ. ॥೭॥

ಸಕೃದ್ವಿಭಾತಸದಾನಂದಾನುಭವೈಕಗೋಚರೋ ಬ್ರಹ್ಮವಿದ್ವಿ
ದ್ವಾಂಶ್ಚಕ್ಷುರಾದಿಬಾಹ್ಯಪ್ರಪಂಚೋಪರತಃ ಸರ್ವಂ
ಜಗದಾತ್ಮತ್ವೇನ ಪಶ್ಯನ್ನಾತ್ಮೇತಿ ಭಾವಯನ್ ಕೃತಕೃತ್ಯೋ
ಭವತಿ ॥

ಒಂದೇ ಒಂದು ಬಾರೇ ನಾನು ಸದಾನಂದ ಸ್ವರೂಪನಿದ್ದೇನೆಂದು ಸಾಕ್ಷಾತ್ಕಾರವನ್ನು ಪಡೆದ ಬ್ರಹ್ಮಜ್ಞಾನಿಯಾದ ಪಂಡಿತನು ಚಕ್ಷು ರಿಂದ್ರಿಯ ಮೊದಲಾದ ಹೊರಗಿನ ಸಕಲ ಪ್ರಪಂಚದಿಂದ ಉಪರತನಾಗಿ ನಾಮರೂಪಾತ್ಮಕ ಜಗತ್ತನ್ನು ಸದ್ರೂಪವಾದ ನನ್ನ ಆತ್ಮನಿಗಿಂತಲೂ ಬೇರಿಲ್ಲವೆಂದು ನೋಡುತ್ತಾ ಅರ್ಥಾತ್ ಪಟವೇ ಕುಟಿಯಾದಂತೆ ನನ್ನ ಆತ್ಮನೇ ಜಗದ್ರೂಪನಾಗಿದ್ದೇನೆಂದು ಭಾವಿಸುತ್ತಾ ಕೃತಕೃತ್ಯನಾಗು ತ್ತಾನೆ. ಅಂದರೆ ಮಾಡುವುದನ್ನೆಲ್ಲಾ ಮಾಡಿ ಮುಗಿಸಿದವನಾಗಿರು ತ್ತಾನೆ. ॥೮॥

ನಿರ್ದ್ವಂದ್ವಃ ಸ ಸದಾಽಚಂಚಲಗಾತ್ರಃ ಪರಮಶಾಂತಿಂ ಸ್ವೀಕೃತ್ಯ ನಿತ್ಯಶುದ್ಧಃ ಪರಮಾತ್ಮಾಹಮೇತ್ಯಖಂಡಾನಂದಃ ಪೂರ್ಣ ಕೃತಾರ್ಥಃ ಪರಿಪೂರ್ಣಪರಮಾಕಾಶಮಗ್ನಮನಾಃ ಪ್ರಾಪ್ತೋನ್ಮನ್ಯವಸ್ಥಃ ಸಂನ್ಯಸ್ತಸರ್ವೇಂದ್ರಿಯವರ್ಗೋಽನೇಕಜನ್ಮಾರ್ಜಿತ ಪುಣ್ಯಪುಂಜಪರಿಪಕ್ವಕೈವಲ್ಯಫಲೋಽಖಂಡಾನಂದನಿರಸ್ತಸರ್ವ ಕ್ಲೇಶಕಶ್ಮಲೋ ಬ್ರಹ್ಮಾಹಮಸ್ಮೀತಿ ಕೃತಕೃತ್ಯೋ ಭವತಿ ॥

ಶೀತಉಷ್ಣ, ಹಸಿವು-ತೃಷೆ, ಲಾಭ-ಹಾನಿ, ಇವೇ ಮೊದಲಾದ ದ್ವಂದ್ವರಹಿತ ಯಾವಾಗಲೂ ಚಂಚಲರಹಿತವಾದ ಶರೀರ [ಅವಯವ ವುಳ್ಳವನು.] ಉಳ್ಳವನಾಗಿ ಪರಮ ಶಾಂತಿಯನ್ನು ಪಡೆದು ನಿತ್ಯ ಶುದ್ಧನಾದ ಅಖಂಡಾನಂದ ಪರಿಪೂರ್ಣ ಪರಮಾತ್ಮನೇ ನಾನಿದ್ದೆನೆಂದು ತಿಳಿದ ಕೃತಾರ್ಥನು ಪರಿಪೂರ್ಣವಾದ ಬ್ರಹ್ಮದಲ್ಲಿ ಲೀನವಾದ ಮನಸುಳ್ಳನಾಗಿ ಹೊಂದಲ್ಪಟ್ಟ ಉನ್ಮನಿ ಸ್ಥಾನವುಳ್ಳವನಾಗಿ ತ್ಯಾಗ ಮಾಡಲ್ಪಟ್ಟ ಸಕಲೇಂದ್ರಿಯನಾದ [ಸಕಲೇಂದ್ರಿಯವನ್ನು ತ್ಯಾಗ ಮಾಡಿದವನಾಗಿ] ಅನೇಕ ಕೋಟಿ ಜನ್ಮಗಳಲ್ಲಿ ಸಂಗ್ರಹಿಸಲ್ಪಟ್ಟ ಪುಣ್ಯದ ಪರಿಪಕ್ವತೆಯ ಫಲವಾದ ಪರಿಪೂರ್ಣ ಆನಂದವನ್ನು ಪಡೆದಿರುವುದರಿಂದ ಅವಿದ್ಯಾದಿ ಸಕಲ ಕ್ಲೇಶ, ಮಲಗಳಿಂದ ರಹಿತನಾದವನಾಗಿ ಬ್ರಹ್ಮನೇ ನಾನಿದ್ದೇನೆಂಬ ದೃಢಜ್ಞಾನದಿಂದ ಕೃತಕೃತ್ಯನಾಗುತ್ತಾನೆ. ॥೯॥

ಬ್ರಹ್ಮೈವಾಹಮಸ್ಮೀತ್ಯನವರತಂ ಬ್ರಹ್ಮಪ್ರಣವಾನು ಸಂಧಾನೇನ

**ಯಃ ಕೃತಕೃತ್ಯೋ ಭವತಿ ಸ ಪರಮಹಂಸ ಪರಿವ್ರಾಟ್ ॥**

ಯಾವನು ಬ್ರಹ್ಮವೇ ನಾನಿದ್ದೇನೆಂದು ನಿರಂತರವಾಗಿ ಓಂಕಾರದ ಮೂಲಕ ಬ್ರಹ್ಮಾನುಸಂಧಾನವನ್ನು ಮಾಡುವುದರಿಂದ ಕೃತಕೃತ್ಯನಾಗುತ್ತಾನೆಯೋ ಅವನು ಪರಮಹಂಸ ಸನ್ಯಾಸಿಯು. ॥೧೦॥

**ಭಾವಾಭಾವಕಲಾವಿನಿರ್ಮುಕ್ತಃ ಸರ್ವಸಂಶಯಧ್ವಸ್ತಃ ಪೂರ್ಣಾ ಹಂಭಾವಃ ಕೃತಕೃತ್ಯೋ ಭವತಿ ॥**

ಅಜ್ಞಾನ ಮತ್ತು ಅದರ ಕಾರ್ಯವಾದ ನಾಮರೂಪಾತ್ಮಕ ಜಗತ್ತಿನಿಂದ ಮುಕ್ತನಾದ. ಪ್ರಮಾಣಗತ, ಪ್ರಮೇಯಗತ, ಇವೇ ಮೊದಲಾದ ಸಂಶಯಗಳಿಂದ ರಹಿತನಾದ ಪರಿಪೂರ್ಣವಾದ ಬ್ರಹ್ಮವೇ ನಾನಿದ್ದೇನೆಂದು ತಿಳಿದವನಾಗಿ ಕೃತಕೃತ್ಯನಾಗುತ್ತಾನೆ. ॥ ೧॥

**ಪ್ರಾಣೋ ಹ್ಯೇಷ ಸರ್ವಭೂತೈರ್ವಿಭಾತಿ ವಿಜಾನನ್ವಿದ್ವಾನ್ ಭವತೇ ನಾತಿವಾದೀ। ಆತ್ಮಕ್ರೀಡ ಆತ್ಮರತಿಃ ಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ ॥**

ಯಾವ ಈ ಆತ್ಮನು ಪ್ರಾಣಕ್ಕೂ ಪ್ರಾಣನಾಗಿದ್ದಾನೆಯೋ ಮತ್ತು ಸರ್ವ ಭೂತಗಳಲ್ಲಿದ್ದು ಸರ್ವಭೂತಗಳ ಆತ್ಮನಾಗಿ ಸರ್ವಭೂತಗಳನ್ನು ಬೆಳಗುತ್ತಾನೆಯೋ ಇಂತಹ ಆತ್ಮನನ್ನು ತಿಳಿದ ವಿದ್ವಾಂಸನು ಕುತರ್ಕವನ್ನು ಮಾಡುವದಿಲ್ಲ. ಮತ್ತು ಪುತ್ರ ಭಾರ್ಯಾದಿಗಳನ್ನು ತ್ಯಜಿಸಿ ಆತ್ಮನಲ್ಲಿಯೇ ಪ್ರೀತಿಯುಳ್ಳವನು, ಕ್ರಿಡೆಯುಳ್ಳವನು ಅಥವಾ

ಜ್ಞಾನಧ್ಯಾನಾದಿ ಕ್ರಿಯೆಯುಳ್ಳವನಾದ ಇವನು ಬ್ರಹ್ಮವನ್ನು ತಿಳಿದವರಲ್ಲಿ ಶ್ರೇಷ್ಠನು. ॥೧೨॥

ನಿಮಿಷಾರ್ಧಂ ನ ತಿಷ್ಠಂತಿ ವೃತ್ತಿಂ ಬ್ರಹ್ಮಮಯೀಂ ವಿನಾ ।
ಯಥಾ ತಿಷ್ಠಂತಿ ಬ್ರಹ್ಮಾದ್ಯಾಃ ಸನಕಾದ್ಯಾಃ ಶುಕಾದಯಃ ॥

ಹೇಗೆ ಬ್ರಹ್ಮನೇ ಮೊದಲಾದವರು ಮತ್ತು ಸನಕ ಸನಂದಾದಿ ಸಪ್ತಋಷಿಗಳು, ಶುಕನೇ ಮೊದಲಾದ ಬ್ರಹ್ಮಜ್ಞಾನಿಗಳು, ಬ್ರಹ್ಮಾಕಾರ ವೃತ್ತಿಯಿಂದ ಇರುತ್ತಿದ್ದರೋ, ಅದರಂತೆ ಜ್ಞಾನಿಗಳಾದವರು ಅರ್ಧ ನಿಮಿಷವೂ ಕೂಡ ಬ್ರಹ್ಮಾಕಾರವೃತ್ತಿರಹಿತರಾಗಿ ಇರಕೂಡದು. ॥೧೩॥

ಅಧ್ಯಾತ್ಮರತಿರಾಸೀನೋ ನಿರಪೇಕ್ಷೋ ನಿರಾಶಿಷಃ ಸರ್ವದ್ವಂದ್ವೈರ್ವಿನಿರ್ಮುಕ್ತೋ ಬ್ರಹ್ಮಣ್ಯೇವಾವ ತಿಷ್ಠತೇ ॥

ಯಾವನು ಆತ್ಮವಿಷಯಕಗಳಾದ ಶ್ರವಣಮನನಾದಿಗಳಲ್ಲಿ ಆಸಕ್ತನಾಗಿ ಯಾವ ಅಪೇಕ್ಷೆಯೂ ಆಸೆಯೂ ಇಲ್ಲದವನಾಗಿರುತ್ತಾನೆಯೋ ಮತ್ತು ಶೀತೋಷ್ಣಾದಿ ಸಕಲ ದ್ವಂದಗಳಿಂದ ರಹಿತನಾಗಿರುತ್ತಾನೆಯೋ, ಆವನು ಬ್ರಹ್ಮನನ್ನು ತಿಳಿದು ಬ್ರಹ್ಮನೇ ಆಗಿರುತ್ತಾನೆ. ॥೧೪॥

ಕಪಾಲಂ ವೃಕ್ಷಮೂಲಾನಿ ಕುಚೇಲಾನ್ಯಸಹಾಯತಾ । ಸಮತಾ ಚೈವ ಸರ್ವಸ್ಮಿನ್ನೇತನ್ಮುಕ್ತಸ್ಯ ಲಕ್ಷಣಮ್ ॥

ಕೈಯಲ್ಲಿ ಬ್ರಹ್ಮಕಪಾಲವನ್ನು ಧರಿಸಿ ಚಿಂದಿಯ ಬಟ್ಟೆಗಳನ್ನುಟ್ಟು ಯಾರ ಸಹಾಯವೂ ಇಲ್ಲದೇ ಮರದಡಿಯಲ್ಲಿ ವಾಸಿಸುತ್ತಾ ಉತ್ಕೃಷ್ಟ

ನಿಕೃಷ್ಟ [ಶ್ರೇಷ್ಠಕನಿಷ್ಟವಾದ] ವಾದ ವಸ್ತುಗಳಲ್ಲಿ ಸಮಾನತೆಯೇ ಜೀವನ್ಮುಕ್ತನ ಲಕ್ಷಣಗಳು. ॥೧೫॥

**ಸ್ವಪ್ನೇಽಪಿ ಯೋಽಭಿಯುಕ್ತಃ ಸ್ಯಾಜ್ಜಾಗ್ರತೀವ ವಿಶೇಷತಃ ।**
**ಈದೃಕ್‌ಚೇಷ್ಟಃ ಸ್ಮೃತಃ ಶ್ರೇಷ್ಠೋ ವರಿಷ್ಠೋ**
**ಬ್ರಹ್ಮವಾದಿನಾಮ್ ॥**

ಯಾವ ಬ್ರಹ್ಮಜ್ಞಾನಿಯು. ಜಾಗ್ರತ್ತಿನಲ್ಲಿ ಯಾರ ಮೇಲೆಯೂ ದೋಷಾರೋಪಣೆ ಮಾಡದಂತೆ ಸ್ವಪ್ನದಲ್ಲಿಯೂ ಕೂಡಾ ದೋಷಾರೋಪಣೆ ಮಾಡುವುದಿಲ್ಲವೋ, ಅವನು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾಗಿದ್ದಾನೆ. ॥೧೬॥

**ನಿರ್ಮಾನಶ್ಚಾನಹಂಕಾರೋ ನಿರ್ದ್ವಂದ್ವ ಶ್ಛಿನ್ನಸಂಶಯಃ ।**
**ಆತ್ಮಕ್ರೀಡ ಆತ್ಮರತಿರಾತ್ಮವಾನ್ ಸಮದರ್ಶನಃ ॥**

ಪೂಜಾ ಪ್ರತಿಷ್ಠಾ ಮುಂತಾದ ಮಾನರಹಿತನಾಗಿ, ನಾನು ಜ್ಞಾನಿಯೆಂಬ ಅಹಂಕಾರವಿಲ್ಲದವನಾಗಿ, ರಾಗದ್ವೇಷಾದಿ ದ್ವಂದ್ವರಹಿತನಾಗಿ, ಸಕಲ ಸಂಶಯ ರಹಿತನಾಗಿ, ಆತ್ಮನಲ್ಲಿಯೇ ಕ್ರೀಡೆ ಮತ್ತು ಆತ್ಮನಲ್ಲಿಯೇ ರತಿಯುಳ್ಳ ಸಮದರ್ಶಿಯಾದ ಜ್ಞಾನಿಯು ಆತ್ಮನೇ ಆಗುತ್ತಾನೆ. ॥೧೭॥

**ಸ್ಮೃತ್ವಾ ಸ್ಪೃಷ್ಟ್ವಾ ಚ ಭುಕ್ತ್ವಾ ಚ ದೃಷ್ಟ್ವಾ ಜ್ಞಾತ್ವಾ ಶುಭಾಶುಭಮ್ । ನ ಹೃಷ್ಯತಿ ಗ್ಲಾಯತಿ ಯಃ ಸ ಶಾಂತ ಇತಿ**
**ಕಥ್ಯತೇ ।**

ಶುಭವನ್ನಾಗಲಿ ಅಶುಭವನ್ನಾಗಲಿ ನೆನಪಿಸಿಕೊಂಡು ಮುಟ್ಟಿ... ತಿಂದು, ನೋಡಿ, ಮತ್ತು ತಿಳಿದು ಯಾವನು ಸುಖ-ದುಃಖಗಳನ್ನು ಹೊಂದುವುದಿಲ್ಲವೋ, ಅವನು ಶಾಂತನೆಂದೆನಿಸಿಕೊಳ್ಳುತ್ತಾನೆ. ॥೧೮॥

**ಅಪ್ರಾಪ್ತಂ ಹಿ ಪರಿತ್ಯಜ್ಯ ಸಂಪ್ರಾಪ್ತೇ ಸಮತಾಂ ಗತಃ ।**
**ಅದೃಷ್ಟಖೇದಾಖೇದೋ ಯಃ ಸಂತುಷ್ಟ ಇತಿ ಕಥ್ಯತೇ ॥**

ದೊರೆಯದೇ ಇರುವುದನ್ನು ಬಿಟ್ಟು ಅದೃಷ್ಟಕ್ಕನು ಗುಣ... ವಾಗಿಯೇ ಬಂದದ್ದರಲ್ಲಿ ತೃಪ್ತಿಯನ್ನು ಪಡೆದವನಾಗಿ ಯಾವನು ಸುಖ-ದುಃಖ ರಹಿತನಾಗಿದ್ದಾನೆಯೋ, ಅವನು ತೃಪ್ತನೆಂದೆನಿಸಿಕೊಳ್ಳುತ್ತಾನೆ. ॥೧೯॥

**ನಾಕೃತೇನ ಕೃತೇನಾರ್ಥೋ ನ ಶ್ರುತಿಸ್ಮೃತಿವಿಭ್ರಮೈಃ ।**
**ನಿರ್ಮಂಥನ ಇವಾಂಭೋಧಿಃ ಸ ತಿಷ್ಠತಿ ಯಥಾಸ್ಥಿತಃ ॥**

ಶ್ರುತಿ, ಸ್ಮೃತಿಗಳು ಹೇಳಿದ-ಕರ್ಮಗಳನ್ನು ಮಾಡದಿರು... ವುದರಿಂದ ಹಾನಿಯೂ ಇಲ್ಲ. ಮಾಡುವದರಿಂದ ಲಾಭವೂ ಕೂಡ ಇಲ್ಲ. ಕೃತ ಕೃತ್ಯನಾದ ಜ್ಞಾನಿಯು ಶಾಂತವಾದ ಸಾಗರದಂತಿರು... ತ್ತಾನೆ. ॥೨೦॥

**ಸಮ್ಯಗ್ಜ್ಞಾನಾವಬೋಧೇನ ನಿತ್ಯಮೇಕಸಮಾಧಿನಾ ।**
**ಸಾಂಖ್ಯ ಏವಾವಬುದ್ಧಾ ಯೇ ತೇ ಸಾಂಖ್ಯಾ ಯೋಗಿನಃ**
**ಸ್ಮೃತಾಃ ॥**

ಯಥಾರ್ಥ ಜ್ಞಾನವನ್ನು ಪಡೆಯುವದರಿಂದ ಯಾವಾಗಲೂ ಬ್ರಹ್ಮದಲ್ಲಿಯೇ ಮನವನ್ನಿಡುವಿಕೆ ಎಂಬ ಸಮಾಧಿಯಿಂದ ಯಾರು ಈ ಪ್ರಕಾರ ತತ್ತ್ವ ಜ್ಞಾನಪಡೆಯುತ್ತಾರೆಯೋ ಅವರು ಸಾಂಖ್ಯರು. ॥೨೧॥

ಸಾಂಖ್ಯ ಏವಾವಬುದ್ಧಾ ಯೇ ತೇ ಸಾಂಖ್ಯಾ ಯೋಗಿನಃ ಸ್ಮೃತಾಃ ।

ಯಾರು ದೇಹಾದಿ ಅನಾತ್ಮಗಳನ್ನು ತಾನಲ್ಲ ತನ್ನವಲ್ಲವೆಂದೆಣಿಸಿ ಶುದ್ಧಾತ್ಮನೇ ತಾನೆಂದು ತಿಳಿಯುತ್ತಾರೆಯೋ, ಅವರು ಸಾಂಖ್ಯ (ಜ್ಞಾನ) ಯೋಗಿಗಳು ॥೧॥

ಪ್ರಾಣಾದ್ಯನಿಲ ಸಂಶಾಂತೌ ಯುಕ್ತ್ಯಾ ಯೇ ಪದಮಾಗತಾಃ ।
ಅನಾಮಯಮನಾದ್ಯಂತಂ ತೇ ಸ್ಮೃತಾ ಯೋಗಯೋಗಿನಃ ॥

ಪ್ರಾಣಾಪಾನಗಳ ಗಮನಾಗಮನವು ಶಾಂತವಾಗುತ್ತಿರಲು, ಯಾರು ಯುಕ್ತಿಯಿಂದ ದುಃಖವಿಲ್ಲದ ಉತ್ಪತ್ತಿನಾಶಗಳಿಲ್ಲದ ಪದವನ್ನು ಪಡೆಯುತ್ತಾರೆಯೋ, ಅವರು ಯೋಗಿಗಳು. ॥೨॥

ಸುಖದುಃಖದಶಾಧೀರಂ ಸಾಮ್ಯಾನ್ನ ಪ್ರೋದ್ಧರಂತಿ ಯಮ್ ।
ನಿಃಶ್ವಾಸಾ ಇವ ಶೈಲೇಂದ್ರಂ ಚಿತ್ತಂ ತಸ್ಯ ಮೃತಂ ವಿದುಃ ॥

ಸುಖ-ದುಃಖಗಳ ಅವಸ್ಥೆಗಳನ್ನು ಸಮವಾಗಿ ತಿಳಿದ ಯಾವ ಧೀರನನ್ನು ಅವು ಸಮಸ್ಥಿತಿಯಿಂದ ಅಲುಗಾಡಿಸುವುದಿಲ್ಲವೋ, ಅವನು

ಜೀವನ್ಮುಕ್ತನು. ಮಾನವನು ಮೂಗು ಬಾಯಿಗಳಿಂದ ಹೊರಬಿಟ್ಟ ಉಸಿರಿನಿಂದ ಪರ್ವತವು ಅಲುಗಾಡದಂತೆ ಅಚಲವಾದ ನಷ್ಟವಾದ ಅವನ ಚಿತ್ತವು ಅಲುಗಾಡುವುದಿಲ್ಲ. ॥ ೩ ॥

**ವಾಚಾಮತೀತ ವಿಷಯೋ ವಿಷಯಾಶಾದಶೋಜ್ಝಿತಃ**
**ಪರಾನಂದ ರಸಾಕ್ಷುಬ್ಧೋ ರಮತೇ ಸ್ವಾತ್ಮನಿ ॥**

ಜೀವನ್ಮುಕ್ತನು ಬ್ರಹ್ಮದಂತೆ ಮಾತಿಗೆ ವಿಷಯನಾಗಿರುವುದಿಲ್ಲ. ಅವನು ವಿಷಯಗಳ ಆಸೆ ಎಂಬ ಸೀಮೆಯನ್ನು ದಾಟಿ, ಬ್ರಹ್ಮಾನಂದ ಮಗ್ನನಾಗಿ ತನ್ನಲ್ಲಿಯೇ ತಾನು ರಮಿಸುತ್ತಾನೆ. ॥ ೪ ॥

**ನಿಗ್ರ್ರಂಥಿಃ ಶಾಂತಸಂದೇಹೋ ಜೀವನ್ಮುಕ್ತೋ ವಿಭಾವನಃ ।**
**ಅನಿರ್ವಾಣೋಽಪಿ ನಿರ್ವಾಣಶ್ಚಿತ್ರದೀಪ ಇವ ಸ್ಥಿತಃ ।**
**ನಿರ್ಧನೋಽಪಿ ಸದಾ ತುಷ್ಟೋಽಸಹಾಯೋ ಮಹಾಬಲಃ ।**

ಹೃದಯಗ್ರಂಥಿಯು ಇಲ್ಲದ, ಸಂಶಯಗಳಿಲ್ಲದ, ಅನಾತ್ಮ ಭಾವಗಳಿಲ್ಲದ, ಜೀವನ್ಮುಕ್ತನು, ದೇಹವಿದ್ದರೂ ದೇಹರಹಿತನಾಗಿ ಇರುತ್ತಾನೆ. ಅವನ ಚಿತ್ತವು ದೊಡ್ಡ ದೀಪದಂತಿರುತ್ತದೆ. ಮತ್ತು ಅವನು ಹಣವಿಲ್ಲದವನಾದರೂ ಯಾವಾಗಲೂ ತೃಪ್ತನಾಗಿರುತ್ತಾನೆ, ಹಾಗೂ ಯಾರ ಸಹಾಯವಿಲ್ಲದಿದ್ದರೂ ವಸಿಷ್ಠರಂತೆ ಬಲಿಷ್ಠನಾಗಿರುತ್ತಾನೆ. ॥ ೫ ॥

**ನಿತ್ಯತೃಪ್ತೋಽಪ್ಯಭುಂಜಾನೋಽಪ್ಯಸಮಃ ಸಮದರ್ಶನಃ ।**
**ಕುರ್ವನ್ನಪಿ ನ ಕುರ್ವಾಣಶ್ಚಾಭೋಕ್ತಾ ಫಲಭೋಗ್ಯಪಿ ॥**

ಊಟಮಾಡದವನಾದರೂ ನಿತ್ಯ ತೃಪ್ತನಾಗಿ, ವಿಷಮವಾದ ಜಗತ್ತಿನಲ್ಲಿ ಸಮವಾದ ಬ್ರಹ್ಮವನ್ನು ನೋಡುತ್ತಾ, ಮಾಡಿದರೂ ಮಾಡದವನಾಗಿ, ಫಲಗಳನ್ನು ಅನುಭವಿಸಿದರೂ ಕೂಡ ಅಭೋಕ್ತ ನಾಗಿರುತ್ತಾನೆ. ॥೬॥

ಶರೀರ್ಯಪ್ಯ ಶರೀರೋಽಸೌ ಪರಿಚ್ಛಿನ್ನೋಽಪಿ ಸರ್ವಗಃ ।
ಅಧ್ಯಾತ್ಮರತಿರಾಸೀನೋ ಪೂರ್ಣಃ ಪಾವನ ಮಾನಸಃ ॥

ಇವನು ಶರೀರವುಳ್ಳವನಾದರೂ ಶರೀರವಿಲ್ಲದವನು. ಪರಿಚ್ಛಿನ್ನ ನಾದರೂ ಕೂಡ ಸರ್ವವ್ಯಾಪಕನು. ಅಧ್ಯಾತ್ಮದಲ್ಲಿ ಪ್ರೀತಿಯುಳ್ಳವ ನಾಗಿ ಪೂರ್ಣನಾಗಿ ಪವಿತ್ರವಾದ ಮನಸ್ಸುಳ್ಳವನಾಗಿರುತ್ತಾನೆ. ॥೭॥

ನೈಷ್ಕರ್ಮ್ಯೇಣ ನ ತಸ್ಯಾರ್ಥಸ್ತಸ್ಯಾರ್ಥೋಽಸ್ತಿ ನ ಕರ್ಮಭಿಃ ।
ನ ಸಮಾಧಾನಜಾಪ್ಯಾಭ್ಯಾಂ ಯಸ್ಯ ನಿರ್ವಾಸನಂ ಮನಃ ॥

ಯಾವನ ಮನವು ವಾಸನೆಗಳಿಂದ ರಹಿತವಾಗಿದೆಯೋ ಅವನಿಗೆ ಕರ್ಮಗಳನ್ನು ಮಾಡುವುದರಿಂದಾಗಲಿ ಅವುಗಳನ್ನು ಬಿಟ್ಟು ಸುಮ್ಮನಿ ರುವುದರಿಂದ ಯಾವ ಪ್ರಯೋಜನಗಳಿರುವುದಿಲ್ಲ. ಸಮಾಧಾನ ಮತ್ತು ಜಪಗಳಿಂದಲೂ ಪ್ರಯೋಜನವಿರುವುದಿಲ್ಲ. ॥೮॥

ಜಗಜ್ಜೀವಾದಿರೂಪೇಣ ಪಶ್ಯನ್ನಪಿ ಪರಾತ್ಮವಿತ್ ।
ನ ತತ್ಪಶ್ಯತಿ ಚಿದ್ರೂಪಂ ಬ್ರಹ್ಮವಸ್ತ್ವೇವ ಪಶ್ಯತಿ ॥

ಅಜ್ಞಾನಿಗಳ ಕಣ್ಣಿಗೆ ಜ್ಞಾನಿಯೂ ಕೂಡ ಜೀವ ಜಗತ್ತು ಮೊದ ಲಾದವುಗಳನ್ನು ನೋಡುವಂತೆ ಕಂಡರೂ ಕೂಡ ಆವನು, ಆರು

ರೂಪವಾದ ಬ್ರಹ್ಮವನ್ನೇ ನೋಡುತ್ತಾನೆ; ಜಗದಾದಿಗಳನ್ನು ನೋಡುವುದಿಲ್ಲ. ||೯||

ಅಹಮನ್ನಂ ಸದಾನ್ನಾದ ಇತಿ ಹಿ ಬ್ರಹ್ಮವೇದನಮ್ ।
ಬ್ರಹ್ಮವಿದ್ಗ್ರಸತಿ ಜ್ಞಾನಾತ್ಸರ್ವಂ ಬ್ರಹ್ಮಾತ್ಮನೈವ ತು ||

ನಾನು ಸದಾ ಅನ್ನವು ಮತ್ತು ಅನ್ನವನ್ನು ತಿನ್ನುವವನೆಂದು ತಿಳಿಯುವುದೇ ಬ್ರಹ್ಮಜ್ಞಾನವು. ಜ್ಞಾನಿಯು ಜ್ಞಾನದಿಂದ ಎಲ್ಲವನ್ನು ಬ್ರಹ್ಮ ರೂಪದಿಂದ ಊಟಮಾಡುತ್ತಾನೆ. ||೧೦||

ಸಮಾಧಿಮಥ ಕರ್ಮಾಣಿ ಮಾ ಕರೋತು ಕರೋತು ವಾ ।
ಹೃದಯೇನಾತ್ತ ಸರ್ವೇಹೋ ಮುಕ್ತ ಏವೋತ್ತಮಾಶಯಃ ॥

ಸಮಾಧಿಯನ್ನಾಗಲಿ, ಅಥವಾ ಕರ್ಮಗಳನ್ನಾಗಲಿ, ಮಾಡಲಿ ಅಥವಾ ಮಾಡದಿರಲಿ. ಜ್ಞಾನಿಯು ಹೃದಯದಿಂದ ಎಲ್ಲಕಾಮನೆಗಳನ್ನು ಪೂರ್ಣಮಾಡಿ ಕೊಂಡಿರುವುದರಿಂದ ಆವನು ಮುಕ್ತನಾಗಿದ್ದಾನೆಂಬ ಭಾವವು. ||೧೧||

ಅಕ್ಷರತ್ವಾದ್ವರೇಣ್ಯತ್ವಾದ್ವ್ಯಸ್ತಸಂಸಾರಬಂಧನಾತ್ ।
ತತ್ತ್ವಮಸ್ಯಾದಿಲಕ್ಷ್ಯತ್ವಾದವಧೂತ ಇತೀರ್ಯತೇ ||

ಬ್ರಹ್ಮವನ್ನು ತಿಳಿದು ಬ್ರಹ್ಮನಾದ್ದರಿಂದ ವರಿಸಲು ಯೋಗ್ಯನಾದ್ದರಿಂದ ಸಂಸಾರ ಬಂಧನದಿಂದ ಬಿಡುಗಡೆಯಾದ್ದರಿಂದ ಮತ್ತು 'ತತ್ತ್ವಮಸ್ಯಾದಿ' ಲಕ್ಷ್ಯನಾದ್ದರಿಂದ ಆವಧೂತನೆಂದು ಹೇಳಿಸಿಕೊಳ್ಳುತ್ತಾನೆ. ||೧೨||

ಯೋ ವಿಲಂಘ್ಯಾಶ್ರಮಾನ್ವರ್ಣಾನಾತ್ಮನ್ಯೇವ ಸ್ಥಿತಃ ಪುಮಾನ್ । ಅತಿವರ್ಣಾಶ್ರಮೀ ಯೋಗಿ ಹ್ಯವಧೂತಃ ಸ ॥

ಯಾವ ಪುರುಷನು ಬ್ರಹ್ಮಚರ್ಯಾದಿ ಆಶ್ರಮಗಳನ್ನು ಬ್ರಾಹ್ಮಣಾದಿ ವರ್ಣಗಳನ್ನು ದಾಟಿ. ಆತ್ಮನಲ್ಲಿಯೇ ಸ್ಥಿತನಾಗಿ ಇರುತ್ತಾನೆಯೊ, ಆ ವರ್ಣಾಶ್ರಮಗಳನ್ನು ದಾಟಿದ ಯೋಗಿಯು ಅವಧೂತನೆನ್ನಿಸಿಕೊಳ್ಳುತ್ತಾನೆ.

ಯಥಾ ರವಿಃ ಸರ್ವರಸಾನ್ಪ್ರಭುಂಕ್ತೇ ಹುತಾಶನಶ್ಚಾಪಿ ಹಿ ಸರ್ವಭಕ್ಷಃ । ತಥೈವ ಯೋಗೀ ವಿಷಯಾನ್ಪ್ರಭುಂಕ್ತೇ ನ ಲಿಪ್ಯತೇ ಪುಣ್ಯಪಾಪೈಶ್ಚ ಶುದ್ಧಃ ॥

ಸೂರ್ಯನು ಸರ್ವ ಸಾರಗಳನ್ನು ಹೀರುವಂತೆ ಅಗ್ನಿಯು ಎಲ್ಲವನ್ನು ತಿನ್ನು (ಸುಡು)ವಂತ ಯೋಗಿಯು ವಿಷಯಗಳನ್ನು ಅನುಭಸುತ್ತಾನೆ. ಆದರೆ ಅವನಿಗೆ ಪುಣ್ಯ ಪಾಪಗಳು ಅಂಟುವುದಿಲ್ಲ ಕಿಂತು ನಾಲಿಗೆಯಂತೆ ಶುದ್ಧನಾಗಿರುತ್ತಾನೆ. ॥೧೩॥

ಕೇವಲಂ ಸುಸಮಃ ಸ್ವಚ್ಛೋ ಮೌನೀ ಮುದಿತಮಾನಸಃ ।
ಸಂತೋಷಾಮೃತಪಾನೇನ ಯೋ ಶಾಂತಾಸ್ತೃಪ್ತಿಮಾಗತಾಃ ॥

ಯಾವನು ಎಲ್ಲರಲ್ಲಿ ಸಮನೂ ಪುಣ್ಯಪಾಪಗಳಿಲ್ಲದವನೂ ಮೌನಿಯೂ ಸಂತೋಷಗೊಂಡ ಮನಸ್ಸುಳ್ಳವನೂ ಹಾಗೂ ಸಂತೋಷ

ವೆಂಬ ಅಮೃತಪಾನದಿಂದ ತೃಪ್ತಿಯನ್ನು ಪಡೆದಿದ್ದಾನೆಯೋ, ಅವನು ಜ್ಞಾನಿಯು. ॥೧೪॥

ಆತ್ಮಾರಾಮಾ ಮಹಾತ್ಮಾನಸ್ತೇ ಮಹಾಪದಮಾಗತಾಃ ।
ಹರ್ಷಾಮರ್ಷ ಭಯಕ್ರೋಧ ಕಾಮ ಕಾರ್ಪಣ್ಯದೃಷ್ಟಿಭಿಃ ॥
ನ ಹೃಷ್ಯತಿ ಗ್ಲಾಯತಿ ಯಃ ಸ ಜೀವನ್ಮುಕ್ತ ಉಚ್ಯತೇ ॥

ಬ್ರಹ್ಮವೇ ತಾನೆಂದು ತಿಳಿದು ಬ್ರಹ್ಮರಾದ ಆತ್ಮಾರಾಮರಾದ ಆ ಮಹಾತ್ಮರು. ಹರ್ಷ, ಅಮರ್ಷ, ಭಯ, ಕ್ರೋಧ, ಕಾಮ, ಕಾರ್ಪಣ್ಯಗಳೆಂಬ ದೃಷ್ಟಿಗಳಿಂದ ಸಂತೋಷಗೊಳ್ಳುವದಿಲ್ಲ. ದುಃಖಪಡುವುದಿಲ್ಲ ಇವರು ಜೀವನ್ಮುಕ್ತರೆನಿಸಿಕೊಳ್ಳುತ್ತಾರೆ. ॥೧೫॥

ಅಹಂಕಾರಮಯೀಂ ತ್ಯಕ್ತ್ವಾ ವಾಸನಾಂ ಲೀಲಯೈವ ಯಃ ।
ತಿಷ್ಠತಿ ಧ್ಯೇಯಂ ಸಂತ್ಯಾಗಿ ಸ ಜೀವನ್ಮುಕ್ತ ಉಚ್ಯತೇ ॥

ಯಾವನು ಲೀಲಾಜಾಲವಾಗಿ ಅಹಂಕಾರ ಮಯವಾದ ವಾಸನೆಗಳನ್ನು ಬಿಟ್ಟು ಧ್ಯೇಯವನ್ನು ತ್ಯಾಗಮಾಡಿರುತ್ತಾನೆಯೋ, ಅವನು ಜೀವನ್ಮುಕ್ತನೆನಿಸಿಕೊಳ್ಳುತ್ತಾನೆ. ॥೧೬॥

ಮೌನವಾನ್ನಿರಹಂಭಾವೋ ನಿರ್ಮಾನೋ ಮುಕ್ತಮತ್ಸರಃ ।
ಯಃ ಕರೋತಿ ಗತೋದ್ವೇಗಃ ಸ ಜೀವನ್ಮುಕ್ತ ಉಚ್ಯತೇ ॥

ಯಾವನು ಮೌನಿಯೂ ಅಹಂಕಾರವಿಲ್ಲದವನೂ ಮಾನ ಮತ್ತು ಮತ್ಸರಗಳಿಲ್ಲದವನೂ ಉದ್ವೇಗವಿಲ್ಲದವನಾಗಿದ್ದಾನೆಯೋ; ಅವನು ಜೀವನ್ಮುಕ್ತನು. ॥೧೭॥

**ಯಾವತೀ ದೃಶ್ಯ ಕಲನಾ ಸಕಲೇಯಂ ವಿಲೋಕ್ಯತೇ ।**
**ಸಾ ಯೇನ ಸುಷ್ಠು ಸಂತ್ಯಕ್ತಾ ಸ ಜೀವನ್ಮುಕ್ತ ಉಚ್ಯತೇ ॥**

ಯಾವನು ದೃಶ್ಯವಾದ ನಾಮ, ರೂಪ, ಕ್ರಿಯಾತ್ಮಕವಾದ ಜಗತ್ತನ್ನು ಸಂಪೂರ್ಣವಾಗಿ ತ್ಯಾಗಮಾಡಿದ್ದಾನೆಯೋ, ಅವನು ಜೀವನ್ಮುಕ್ತನು. ॥೧೮॥

**ಉದ್ವೇಗಾನಂದರಹಿತಃ ಸಮಯಾ ಸ್ವಚ್ಛಯಾ ಧಿಯಾ ।**
**ನ ಶೋಚತೇ ನ ಚೋದೇತಿ ಸ ಜೀವನ್ಮುಕ್ತ ಉಚ್ಯತೇ ॥**

ಯಾವನು ಸಮವಾದ ಸ್ವಚ್ಛವಾದ ಬುದ್ಧಿಯಿಂದ ಉದ್ವೇಗ ಮತ್ತು ಆನಂದಗಳಿಲ್ಲದವನಾಗಿ ದುಃಖಿಸುವುದಿಲ್ಲ ಮತ್ತು ಯಾರಿಗೂ ಕರ್ಮಮಾಡೆಂದು ಹೇಳುವುದಿಲ್ಲವೋ, ಅವನು ಜೀವನ್ಮುಕ್ತನು. ॥೧೯॥

**ಸರ್ವೇಚ್ಛಾ ಸಕಲಾಃ ಶಂಕಾ ಸರ್ವೇಹಾ ಸರ್ವನಿಶ್ಚಯಾಃ ।**
**ಧಿಯಾ ಯೇನ ಪರಿತ್ಯಕ್ತಾಃ ಸ ಜೀವನ್ಮುಕ್ತ ಉಚ್ಯತೇ ॥**

ಯಾವನು ಸಕಲ ಇಚ್ಛೆಗಳನ್ನು, ಸಕಲ ಶಂಕೆಗಳನ್ನು, ಸರ್ವ ರಾಗಗಳನ್ನು ಸರ್ವ ನಿಶ್ಚಯಗಳನ್ನು ಬುದ್ಧಿಯಿಂದ ತ್ಯಾಗಮಾಡಿದ್ದಾನೆಯೋ, ಅವನು ಜೀವನ್ಮುಕ್ತನು. ॥೨೦॥

**ಜನ್ಮಸ್ಥಿತಿವಿನಾಶೇಷು ಸೋದಯಾಸ್ತಮಯೇಷು ಚ ।**
**ಸಮಮೇವ ಮನೋ ಯಸ್ಯ ಸ ಜೀವನ್ಮುಕ್ತ ಉಚ್ಯತೇ ॥**

ಹುಟ್ಟು ಬದುಕು ಮರಣಗಳಲ್ಲಿ ಉದಯ ಮಧ್ಯಾಹ್ನ

ಸೂರ್ಯಾಸ್ತ ಕಾಲಗಳಲ್ಲಿ ಯಾವನ ಮನವು ಒಂದೇ ರೀತಿಯಾಗಿರುತ್ತದೆಯೋ, ಅವನು ಜೀವನ್ಮುಕ್ತನು. ॥೨೧॥

**ಸರ್ವಾಧಿಷ್ಠಾನ ಚಿನ್ಮಾತ್ರೇ ನಿರ್ವಿಕಲ್ಪೇ ಚಿದಾತ್ಮನಿ ।**
**ಯೋಜೀವತಿ ಗತಸ್ನೇಹಃ ಸ ಜೀವನ್ಮುಕ್ತ ಉಚ್ಯತೇ ॥**

ಎಲ್ಲಕ್ಕೂ ಅಧಿಷ್ಠಾನವಾದ ಅರುರೂಪವಾದ ಕಲ್ಪನೆಗಳಿಲ್ಲದ ಚಿದ್ರೂಪಾತ್ಮನಲ್ಲಿ ಯಾವನು ಅನಾತ್ಮ ಸ್ನೇಹರಹಿತನಾಗಿರುತ್ತಾನೆಯೋ, ಅವನು ಜೀವನ್ಮುಕ್ತನು. ॥೨೨॥

**ಕ್ರಿಯಾನಾಶಾದ್ಭವೇಚ್ಚಿಂತಾ ನಾಶೋಽಸ್ಮಾದ್ವಾಸನಾ ಕ್ಷಯಃ ।**
**ವಾಸನಾ ಪ್ರಕ್ಷಯೋ ಮೋಕ್ಷಃ ಸ ಜೀವನ್ಮುಕ್ತ ಉಚ್ಯತೇ ॥**

ಕ್ರಿಯಾನಾಶದಿಂದ ಚಿಂತೆಯು ನಾಶವಾಗುತ್ತದೆ. ಇದರಿಂದ ಲೋಕಾದಿ ವಾಸನೆಗಳು ಕ್ಷಯವಾಗುತ್ತವೆ. ವಾಸನೆಯು ಚನ್ನಾಗಿ ಕ್ಷಯವಾಗುತ್ತಿರಲು ಅವನು ಜೀವನ್ಮುಕ್ತನು. ॥೨೩॥

**ನಿರ್ವಿಕಲ್ಪಾ ಚ ಚಿನ್ಮಾತ್ರಾ ವೃತ್ತಿಃ ಪ್ರಜ್ಞೇತಿ ಕಥ್ಯತೇ ।**
**ಸಾ ಸರ್ವದಾ ಭವೇದ್ಯಸ್ಯ ಸ ಜೀವನ್ಮುಕ್ತ ಉಚ್ಯತೇ ॥**

ಯಾವನ ವೃತ್ತಿಯು ಕಲ್ಪನಾರಹಿತವಾಗಿ ಅರುರೂಪವಾಗಿದೆಯೋ, ಅದನ್ನು ಪ್ರಜ್ಞಾ ಎನ್ನುತ್ತಾರೆ. ಅದು ಯಾವನಿಗೆ ಯಾವಾಗಲೂ ಇರುತ್ತದೆಯೋ, ಅವನು ಜೀವನ್ಮುಕ್ತನು. ॥೨೪॥

**ದೇಹೇಂದ್ರಿಯೇಷ್ವಹಂಭಾವ ಇದಂ ಭಾವಸ್ತದನ್ಯಕೇ ।**

**ಯಸ್ಯಮನೋ ಭವತಃ ಕ್ವಾಪಿ ಸ ಜಿವನ್ಮುಕ್ತ ಉಚ್ಯತೇ ॥**

ತನ್ನ ಶರೀರ–ಇಂದ್ರಿಯಗಳಲ್ಲಿ ನಾನೆಂಬ ಅವುಗಳಿಗಿಂತ ಬೇರೆ ಯಾದ ಮನೆ ಮಡದಿ ಮಕ್ಕಳುಗಳಲ್ಲಿ ನನ್ನವೆಂಬ ಭಾವನೆಯು ಯಾವನಿಗಿರುವುದಿಲ್ಲವೋ, ಅವನು ಜಿವನ್ಮುಕ್ತನು. ॥೨೫॥

**ನ ಪ್ರತ್ಯಗ್ಬ್ರಹ್ಮಣೋರ್ಭೇದಂ ಕದಾಪಿ ಬ್ರಹ್ಮಸರ್ಗಯೋಃ ।**
**ಪ್ರಜ್ಞಯಾ ಯೋ ವಿಜಾನಾತಿ ಸ ಜೀವನ್ಮುಕ್ತ ಉಚ್ಯತೇ ॥**

ಜಗದುತ್ಪತ್ತಿ ಮತ್ತು ವಿನಾಶಗಳಲ್ಲಿ ಜೀವ–ಬ್ರಹ್ಮರಲ್ಲಿ ಎಂದೂ ಭೇದವಿಲ್ಲವೆಂದು ಯಾವನು ಜ್ಞಾನದಿಂದ ತಿಳಿಯುತ್ತಾನೆಯೋ, ಅವನು ಜೀವನ್ಮುಕ್ತನು. ॥೨೬॥

**ಸಾಧುಭಿಃ ಪೂಜ್ಯಮಾನೋಽಪಿ ಪೀಡ್ಯಮಾನೋಽಪಿ ದುರ್ಜನೈಃ । ಸಮಮೇವ ಭವೇದ್ಯಸ್ಯ ಸ ಜೀವನ್ಮುಕ್ತ ಉಚ್ಯತೇ ॥**

ಒಳ್ಳೆಯ ಭಕ್ತರಿಂದ ಪೂಜಿಸಲ್ಪಟ್ಟವನಾದರೂ ದುಷ್ಟಜನರಿಂದ ಪೀಡಿಸಲ್ಪಟ್ಟವನಾದರೂ ಯಾವನಿಗೆ ಅವೆರಡೂ ಸಮವಾಗಿವೆಯೋ, ಅವನು ಜೀವನ್ಮುಕ್ತನು. ॥೨೭॥

**ಯಥಾ ಸ್ಥಿತಮಿದಂ ಯಸ್ಯ ವ್ಯವಹಾರವತೋಽಪಿ ಚ ।**
**ಅಸ್ತಂಗತಂ ಸ್ಥಿತಂ ವ್ಯೋಮ ಸ ಜೀವನ್ಮುಕ್ತ ಉಚ್ಯತೇ ॥**

ಯಾವನು ವ್ಯವಹಾರವುಳ್ಳವನಾದರೂ (ಅವನಿಗೆ) ಜ್ಞಾನಿಗೆ ಮಿಥ್ಯೆ ಎಂದು ತಿಳಿದರೂ ಮೃಗಜಲವು ನೀರಿನಂತೆ ಕಾಣುವಂತೆ ಈ ಜಗತ್ತು ಮೊದಲಿನಂತಿರುತ್ತದೆ. ಅದು ಇದ್ದರೂ ಬಾಧಿಸ

ಕೊಂಡು ಹೋದರೂ ಅವನು ಆಕಾಶದಂತೆ ನಿರ್ವಿಕಾರನಾಗಿರುತ್ತಾನೆ. ಆದ್ದರಿಂದ ಅವನು ಜೀವನ್ಮುಕ್ತನು. ॥೨೮॥

ನೋದೇತಿ ನಾಸ್ತಮಾಯಾತಿ ಸುಖೇ ದುಃಖೇ ಮನಃ ಪ್ರಭಾ ।
ಯಥಾಪ್ರಾಪ್ತಸ್ಥಿತಿರ್ಯಸ್ಯ ಸ ಜಿವನ್ಮುಕ್ತ ಉಚ್ಯತೇ ॥

ಸುಖ-ದುಃಖಗಳು ಬಂದಾಗ ಯಾವನ ಮನದ ಪ್ರಭೆಯು ಹೆಚ್ಚು ಕಡಿಮೆಯಾಗುವುದಿಲ್ಲವೋ, ಯಾವನು ತಾನು ಪಡೆದ ಸ್ಥಿತಿಯಲ್ಲಿರುತ್ತಾನೆಯೋ, ಅವನು ಜೀವನ್ಮುಕ್ತನು. ॥೨೯॥

ಯೋ ಜಾಗರ್ತಿ ಸುಷುಪ್ತಿಸ್ಥೋ ಯಸ್ಯ ಜಾಗ್ರನ್ನವಿದ್ಯತೇ ।
ಯಸ್ಯ ನಿರ್ವಾಸನೋ ಬೋಧಃ ಸ ಜೀವನ್ಮುಕ್ತ ಉಚ್ಯತೇ ॥

ಯಾವನು ಒಮ್ಮೆ ಅವಿದ್ಯೆಯೆಂಬ ನಿದ್ರೆಯಿಂದ ಎದ್ದಿದ್ದಾನೆಯೋ, ಯಾವನಿಗೆ ಇನ್ನೊಮ್ಮೆ ಎಚ್ಚರವಾಗುವತನವಿಲ್ಲವೋ, ಯಾವನ ಜ್ಞಾನವು ವಾಸನಾ ರಹಿತವಾಗಿದೆಯೋ, ಅವನು ಜೀವನ್ಮುಕ್ತನು. ॥೩೦॥

ರಾಗದ್ವೇಷಭಯಾದೀನಾಮನುರೂಪಂ ಚರನ್ನಪಿ । ಯೋಽಂ
ತರ್ವ್ಯೋಮವದತ್ಯಚ್ಛಃ ಸ ಜೀವನ್ಮುಕ್ತ ಉಚ್ಯತೇ ॥

ರಾಗ, ದ್ವೇಷ, ಭಯಮೊದಲಾದವುಗಳಿಗನುಗುಣವಾಗಿ ವ್ಯವಹರಿಸುತ್ತಿದ್ದರೂ ಕೂಡ ಯಾವನು ಒಳಗಡೆಗಿರುವ ಆಕಾಶದಂತೆ ಅತಿಸ್ವಚ್ಛನಾಗಿದ್ದಾನೆಯೋ, ಅವನು ಜೀವನ್ಮುಕ್ತನು. ॥೩೦॥

ಯಃ ಸಮಸ್ತಾರ್ಥಜಾಲೇಷು ವ್ಯವಹಾರ್ಯಪಿ ಶೀತಲಃ ।
ಪರಾರ್ಥೇಷ್ವಿವ ಪೂರ್ಣಾತ್ಮಾ ಸ ಜೀವನ್ಮುಕ್ತ ಉಚ್ಯತೇ ॥

ಯಾವನು ಸರ್ವ ವಿಷಯಗಳ ಜಾಲಗಳಲ್ಲಿ ವ್ಯವಹಾರ ಮಾಡು ತ್ತಿದ್ದರೂ ಬೇರೆಯವರ ಪದಾರ್ಥಗಳಲ್ಲಿರುವಂತೆ ಶೀತಲವಾಗಿದ್ದಾನೆ ಯೋ, ಆ ಪೂರ್ಣಾತ್ಮನು ಜೀವನ್ಮುಕ್ತನು. ॥೩೨॥

ಚೈತ್ಯವರ್ಜಿತ ಚಿನ್ಮಾತ್ರೇ ಪದೇ ಪರಮ ಪಾವನೇ ।
ಅಕ್ಷುಬ್ಧಚಿತ್ತೋ ವಿಶ್ರಾಂತಃ ಸ ಜೀವನ್ಮುಕ್ತ ಉಚ್ಯತೇ ॥

ಚಿತ್ತವೃತ್ತಿ ರಹಿತವಾದ ಅರುರೂಪವಾದ ಪಾವನವಾದ ಪರ ಬ್ರಹ್ಮ ಪದದಲ್ಲಿ ಯಾವನು ಕ್ಷೋಭೆ ಇಲ್ಲದ ಚಿತ್ತದವನಾಗಿದ್ದಾ ನೆಯೋ, ಅವನು ಜೀವನ್ಮುಕ್ತನು. ॥೩೩॥

ಇದಂ ಜಗದಯಂ ಸೋಽಯಂ ದೃಶ್ಯಜಾತಮವಾಸ್ತವಮ್ ।
ಯಸ್ಯ ಚಿತ್ತೇ ನ ಸ್ಫುರತಿ ಸ ಜಿವನ್ಮುಕ್ತ ಉಚ್ಯತೇ ॥

ಜೀವ, ಈಶ್ವರ ಮತ್ತು ದೃಶ್ಯ ಸಮೂಹರೂಪವಾದ ಮಿಥ್ಯೇ ಯಾದ ಈ ಜಗತ್ತು ಯಾವನ ಚಿತ್ತದಲ್ಲಿ ಸ್ಫುರಿಸುವುದಿಲ್ಲವೋ ಅವನು ಜೀವನ್ಮುಕ್ತನು. ॥೩೪॥

ಶಾಂತ ಸಂಸಾರ ಕಲನಃ ಕಲಾವಾನಪಿ ನಿಷ್ಕಲಃ । ಯಃ ಸ ಚಿತ್ತೋಽಪಿ ನಿಶ್ಚಿತ್ತಃ ಸ ಜೀವನ್ಮುಕ್ತ ಉಚ್ಯತೇ ॥

ಸಂಸಾರದ ಜಂಜಾಟವಿಲ್ಲದ ಪ್ರಾಣಾದಿ ಕಲೆಗಳುಳ್ಳವನಾದರೂ ಕಲಾರಹಿತನು ಮತ್ತು ಯಾವನು ಚಿತ್ತವುಳ್ಳವನಾದರೂ (ಚಿಂತೆ)

ಚಿತ್ತವಿಲ್ಲದವನಾಗಿದ್ದಾನೆಯೋ, ಅವನು ಜೀವನ್ಮುಕ್ತನಾಗಿದ್ದಾನೆ. ॥೩೫॥

ಚಿದಾತ್ಮಾಹಂ ಪರಾತ್ಮಾಹಂ ನಿರ್ಗುಣೋಽಹಂ ಪರಾತ್ಪರಃ ।
ಆತ್ಮಮಾತ್ರೇಣ ಯಸ್ತಿಷ್ಠೇತ್ಸ ಜೀವನ್ಮುಕ್ತ ಉಚ್ಯತೇ ॥

ನಾನು ಚಿದ್ರೂಪವಾದ ನಿರ್ಗುಣವಾದ ಮಾಯೆಗಿಂತ ಆಚೆ ಇರುವ ಪರಬ್ರಹ್ಮವಾಗಿದ್ದೇನೆಂದು ಯಾರು ಕೇವಲ ಆತ್ಮರೂಪದಿಂದಿರುತ್ತಾರೆಯೋ, ಅವರು ಜೀವನ್ಮುಕ್ತರು ॥೩೬॥

ದೇಹತ್ರಯಾತಿರಿಕ್ತೋಽಹಂ ಶುದ್ಧಚೈತನ್ಯಮಸ್ಮ್ಯಹಮ್ ।
ಬ್ರಹ್ಮಾಹಮಿತಿ ಯಸ್ಯಾಂತಃ ಸ ಜೀವನ್ಮುಕ್ತ ಉಚ್ಯತೇ ॥

ನಾನು ಸ್ಥೂಲಾದಿ ಮೂರು ದೇಹಗಳಿಗಿಂತ ಬೇರೆಯಾದ ಶುದ್ಧಚೈತನ್ಯರೂಪವಾದ ಬ್ರಹ್ಮವೇ ನಾನಾಗಿದ್ದೇನೆಂದು ಯಾವನು ನಿರ್ಣಯಿಸಿಕೊಂಡಿದ್ದಾನೆಯೋ, ಅವನು ಜೀವನ್ಮುಕ್ತನು. ॥೩೭॥

ಯಸ್ಯ ದೇಹಾದಿಕಂ ನಾಸ್ತಿ ಯಸ್ಯ ಬ್ರಹ್ಮೇತಿ ನಿಶ್ಚಯಃ ।
ಪರಮಾನಂದ ಪೂರ್ಣೋ ಯಃ ಸ ಜೀವನ್ಮುಕ್ತ ಉಚ್ಯತೇ ॥

ಯಾವನಿಗೆ ದೇಹಾದಿಗಳು ನಾನೆಂಬುದಿಲ್ಲವೋ ಮತ್ತು ಬ್ರಹ್ಮವೇ ನಾನೆಂಬ ನಿಶ್ಚಯವುಳ್ಳವನಾಗಿ ಯಾವನು ಪೂರ್ಣವಾದ ಪರಮಾನಂದನಾಗಿದ್ದಾನೆಯೋ, ಅವನು ಜೀವನ್ಮುಕ್ತನು. ॥೩೮॥

**ನಿತ್ಯಾನಂದಃ ಪ್ರಸನ್ನಾತ್ಮಾ ಹ್ಯನ್ಯಚ್ಚಿಂತಾವಿವರ್ಜಿತಃ ।**
**ಕಿಂಚಿದಸ್ತಿತ್ವಹೀನೋ ಯಃ ಸ ಜೀವನ್ಮುಕ್ತ ಉಚ್ಯತೇ ॥**

ನಿತ್ಯಾನಂದನೂ ಪ್ರಸನ್ನವಾದ ಮನಸ್ಸುಳ್ಳವನೂ ಬೇರೆ ಚಿಂತೆಗಳಿಲ್ಲದವನು ಮತ್ತು ಯಾವನು ತಾನು ತನ್ನದೆಂಬುದರಿಂದ ರಹಿತನಾಗಿದ್ದಾನೆಯೋ, ಅವನು ಜೀವನ್ಮುಕ್ತನು. ॥೩೯॥

**ಅಹಂ ಬ್ರಹ್ಮಾಸ್ಮ್ಯಹಂ ಬ್ರಹ್ಮಾಸ್ಮ್ಯಹಂ ಬ್ರಹ್ಮೇತಿ ನಿಶ್ಚಯಃ ।**
**ಚಿದಹಂ ಚಿದಹಂ ಚೇತಿ ಸ ಜೀವನ್ಮುಕ್ತ ಉಚ್ಯತೇ ॥**

ನಾನು ಬ್ರಹ್ಮವಾಗಿದ್ದೇನೆ. ಬ್ರಹ್ಮವೇ ನಾನಾಗಿದ್ದೇನೆಂಬ ನಿಶ್ಚಯವುಳ್ಳ ಹಾಗೂ ನಾನು ಚಿದ್ರೂಪನಾಗಿದ್ದೇನೆ. ಚಿದ್ರೂಪವೇ ನಾನಾಗಿದ್ದೇನೆಂಬ ನಿಶ್ಚಯವುಳ್ಳವನು ಜೀವನ್ಮುಕ್ತನು. ॥೪೦॥

ಜೀವನ್ಮುಕ್ತ ವಾಕ್ಯಗಳು
ಎಂಟನೇ ಪ್ರಕರಣವು ಮುಗಿಯಿತು.

## ೯ ಸ್ವಾನುಭವ ವಾಕ್ಯಗಳು

**ಯೋಽಸಾವಸೌ ಪುರುಷಃ ಸೋಽಹಮಸ್ಮಿ**

ಸೂರ್ಯ ಮಂಡಲದಲ್ಲಿರುವ ಪುರುಷನೇ ನಾನಾಗಿದ್ದೇನೆ. [ಮಾಯೋಪಹಿತನಾದ ಪುರುಷನೇ ನಾನಾಗಿದ್ದೇನೆ.] ॥೧॥

**ತದ್ಯೋಽಹಂ ಸೋಽಸೌ ಯೋಽಸೌ ಸೋಽಹಮಸ್ಮಿ ॥**

ನಾನು ಯಾವ ಬ್ರಹ್ಮವಾಗಿದ್ದೇನೆಯೋ, ಇವನೂ ಆ ಬ್ರಹ್ಮವೇ

ಇವನು ಯಾವ ಬ್ರಹ್ಮವಾಗಿದ್ದಾನೋ, ನಾನು ಆ ಬ್ರಹ್ಮವೇ ಆಗಿರುವೆನು. ॥೨॥

**ಶಂ ಶಾಂತಮಚಲಮದ್ವಯಾನಂದ ಚಿದ್ಘನ ಏವಾಽಸ್ಮಿ ।**

ಶಾಂತವಾದ, ಚಲನವಿಲ್ಲದ, ತನಗೆರಡನೆಯದಿಲ್ಲದ ಸಚ್ಚಿದಾನಂದ ಬ್ರಹ್ಮವೇ ನಾನಾಗಿದ್ದೇನೆ. ॥೩॥

**ತತ್ಪೂರ್ಣಾನಂದೈಕ ಬೋಧಸ್ತದ್ಬ್ರಹ್ಮೈವಾಹಮಸ್ಮಿ ।**

ಆ ಪೂರ್ಣಾನಂದವಾದ ಒಂದಾದ ಜ್ಞಾನರೂಪ ಬ್ರಹ್ಮವೇ ನಾನಾಗಿದ್ದೇನೆ. ॥೪॥

**ತ್ವಂ ವಾಽಹಮಸ್ಮಿ ಭಗವೋ ದೇವ ತೇಽಹಂ ವೈತ್ತ್ವಮಸಿ ॥**

ಪೂಜ್ಯನೇ, ನಾನೇ ನೀನಾಗಿರುವೆ. ಹೇ ದೇವನೆ ನೀನು ನಾನು ಅವರು ಇದು ಎಲ್ಲವೂ ಆಗಿರುವೆ. ॥೫॥

**ಸಚ್ಚಿದಾನಂದಾತ್ಮಕೋಽಹಮಜೋಽಹಂ ಪರಿಪೂರ್ಣೋಽಹಮಸ್ಮಿ । ಶುದ್ಧಾದ್ವೈತ ಬ್ರಹ್ಮಾಹಮ್ ॥**

ಸಚ್ಚಿದಾನಂದರೂಪನಾದ ನಾನು ಜನ್ಮರಹಿತನೂ ಪರಿಪೂರ್ಣನೂ ಆಗಿದ್ದೇನೆ. ಶುದ್ಧವಾದ, ಅದ್ವೈತಬ್ರಹ್ಮವೇ ನಾನಾಗಿದ್ದೇನೆ. ॥೬॥

**ವಾಚಾಮಗೋಚರನಿರಾಕಾರಪರಬ್ರಹ್ಮಸ್ವರೂಪೋಽಹಮೇವ ॥**

ನಿರಾಕಾರವಾದ ಆದ್ದರಿಂದ ಮಾತಿಗೆ ನಿಲುಕದ ಪರಬ್ರಹ್ಮವೇ ನಾನಾಗಿದ್ದೇನೆ. ॥೭॥

**ಸದೋಜ್ಜ್ವಲೋಽವಿದ್ಯಾ ತತ್ಕಾರ್ಯಹೀನಃ ಸ್ವಾತ್ಮಾ ಬಂಧಹರಃ ಸರ್ವದಾ ದ್ವೈತರಹಿತಃ ಆನಂದರೂಪಃ ಸರ್ವಾಧಿಷ್ಠಾನಸನ್ಮಾತ್ರೋ । ನಿರಸ್ತಾವಿದ್ಯ ತಮೋಮೋಹೋಽಹಮೇವಾಹಮೋಂ ತದ್ಯತ್ಪರಂ ಬ್ರಹ್ಮ ರಾಮಚಂದ್ರಶ್ಚಿದಾತ್ಮಕಃ ಸೋಽಹಮೋಂ ತದ್ರಾಮಭದ್ರಃ ಪರಂಜ್ಯೋತಿ ರಸೋಽಹಮೋಂ ॥**

ಯಾವಾಗಲೂ ಉಜ್ವಲವಾದ ಅವಿದ್ಯೆ ಹಾಗೂ ಅದರ ಕಾರ್ಯವಿಲ್ಲದ ನನ್ನ ಅತ್ಮನಾದ, ಬಂಧವನ್ನು ನಾಶಮಾಡುವವನಾದ. ಯಾವಾಗಲೂ ದ್ವೈತವಿಲ್ಲದವನೂ ಆನಂದರೂಪನೂ, ಸರ್ವಕ್ಕೂ ಅಧಿಷ್ಠಾನನೂ ಕೇವಲ ಸದ್ರೂಪನೂ ಹೋಗಲಾಡಿಸಿಕೊಂಡ ಅವಿದ್ಯೆಯೆಂಬ ಕತ್ತಲೆರೂಪವಾದ ಮೋಹವುಳ್ಳವನೂ ನಾನಾಗಿದ್ದೇನೆ. ನಾನೇ ಓಂಕಾರನು. ಚಿದ್ರೂಪವಾದ ರಾಮಚಂದ್ರನೆಂಬ ಹೆಸರಿನ ಬ್ರಹ್ಮವೇ ನಾನಾಗಿದ್ದೇನೆ, ಆ ರಾಮಭದ್ರನೆಂಬ ಪರಂಜ್ಯೋತಿರಸವೇ ನಾನಾಗಿದ್ದೇನೆ. ॥೮-೯॥

**ತತ್ಪರಃ ಪರಮ ಪುರುಷಃ ಪುರಾಣಪುರುಷೋತ್ತಮೋ ನಿತ್ಯಶುದ್ಧಬುದ್ಧಮುಕ್ತ ಸತ್ಯ ಪರಮಾನಂದಾನಂತಾದ್ವಯಪರಿಪೂರ್ಣಃ ಪರಮಾತ್ಮಾ ಬ್ರಹ್ಮೈವಾಽಹಂ ರಾಮೋಽಸ್ಮಿ ॥**

ಪರಬ್ರಹ್ಮನೂ ಪರಮ ಪುರುಷನೂ ಪುರಾಣ ಪುರುಷೋತ್ತಮನೂ ನಿತ್ಯ ಶುದ್ಧ, ಬುದ್ಧ, ಮುಕ್ತ, ಸತ್ಯ ಪರಮಾನಂದ, ಆನಂತ

ಅದ್ವಯ ಪರಿಪೂರ್ಣವಾದ ಬ್ರಹ್ಮವೇ ನಾನಾಗಿದ್ದೇನೆ. ಬ್ರಹ್ಮವೆಂಬ ರಾಮನೇ ನಾನಾಗಿದ್ದೇನೆ. ॥೧೦॥

**ತ್ರಿಷು ಧಾಮಸು ಯದ್ಭೋಜ್ಯಂ ಭೋಕ್ತಾ ಭೋಗಶ್ಚ**
**ಯದ್ಭವೇತ್ ॥**
**ತೇಭ್ಯೋ ವಿಲಕ್ಷಣಃ ಸಾಕ್ಷೀ ಚಿನ್ಮಾತ್ರೋಽಹಂ ಸದಾ ಶಿವಃ ॥**

ಸ್ಥೂಲ, ಸೂಕ್ಷ್ಮ, ಕಾರಣವೆಂಬ ಮೂರು ಶರೀರಗಳಲ್ಲಿ ಯಾವ ಸ್ಥೂಲ, ಸೂಕ್ಷ್ಮ ಆನಂದವೆಂಬ ಯಾವುದು ಭೋಗಿಸಲು ಯೋಗ್ಯವಾದದ್ದು, ಮತ್ತು ಜೀವನು, ಅವನು ಭೋಗಿಸುವ ಭೋಗವೆಂಬುವುದಿದೆಯೋ, ಈ ತ್ರಿಪುಟಿಗಳಿಗಿಂತ ವಿಲಕ್ಷಣನಾದ ಇವೆಲ್ಲವನ್ನು ಸಾಕ್ಷಿಯಾಗಿ ಅರಿಯುವ ಅರು ರೂಪ ಬ್ರಹ್ಮವೇ ನಾನಾಗಿದ್ದೇನೆ ॥೧೧॥

**ಮಯ್ಯೇವ ಸಕಲಂ ಜಾತಂ ಮಯಿ ಸರ್ವಂ ಪ್ರತಿಷ್ಠಿತಮ್ ।**
**ಮಯಿ ಸರ್ವಂ ಲಯಂ ಯಾತಿ ತದ್ಬ್ರಹ್ಮಾದ್ವಯಮಸ್ಮ್ಯ**
**ಹಮ್ ॥**

ಎಲ್ಲವೂ ನನ್ನಲ್ಲಿಯೇ ಹುಟ್ಟಿದೆ ಎಲ್ಲವೂ ನನ್ನಲ್ಲಿಯೇ ಇರುತ್ತದೆ. ಕೊನೆಗೆ ಎಲ್ಲವೂ ನನ್ನಲ್ಲಿಯೇ ಲಯವಾಗುತ್ತದೆ. ಆ ಅದ್ವಯವಾದ ಬ್ರಹ್ಮವೇ ನಾನಾಗಿದ್ದೇನೆ. ॥೧೨॥

**ನಿರ್ವಾಣೋಽಸ್ಮಿ ನಿರೀಹೋಽಸ್ಮಿ ನಿರಂಶೋಽಸ್ಮಿ ನಿರೀಪ್ಸಿತಃ ।**
**ಚಿದಾತ್ಮಾಸ್ಮಿ ನಿರಂಶೋಽಸ್ಮಿ ಪರಾಪರವಿವರ್ಜಿತಃ ॥**

ಮುಕ್ತನಾಗಿದ್ದೇನೆ ರಾಗರಹಿತನಾಗಿದ್ದೇನೆ. ಅಂಶಾಂಶಿಭಾವವಿಲ್ಲದವನಾಗಿದ್ದೇನೆ. ಆಶಾರಹಿತನೂ ಚಿದ್ರೂಪನೂ ಕಾರ್ಯ ಕಾರಣಭಾವರಹಿತನೂ ಆಗಿದ್ದೇನೆ. ನಿಕೃಷ್ಟ, ಶ್ರೇಷ್ಠವೆಂಬ ಭಾವವಿಲ್ಲದನಾದ್ದೇನೆ. ॥೧೩॥

**ಬ್ರಹ್ಮೈವಾಽಹಂ ಸರ್ವವೇದಾಂತವೇದ್ಯಂ ನಾಹಂ ವೇದ್ಯಂ ವ್ಯೋಮ ವಾತಾದಿರೂಪಮ್ ।**

ಸಕಲ ಉಪನಿಷತ್ತುಗಳಿಂದ ತಿಳಿಯಲು ಯೋಗ್ಯವಾದ ಆಕಾಶ, ಮತ್ತು ಗಾಳಿಗಳಂತೆ ರೂಪವಿಲ್ಲದ ಬ್ರಹ್ಮವೇ ನಾನಾಗಿದ್ದೇನೆ. ॥೧೪॥

**ರೂಪಂ ನಾಮ ನಾಹಂ ನ ಕರ್ಮ ಬ್ರಹ್ಮೈವಾಽಹಂ ಸಚ್ಚಿದಾನಂದ ರೂಪಮ್ ।**

ನಾಮ, ರೂಪ, ಕರ್ಮಗಳು ನಾನಲ್ಲ ನಾನು ಸಚ್ಚಿದಾನಂದ ರೂಪನಾಗಿದ್ದೇನೆ. ॥೧೫॥

**ನಿತ್ಯಃ ಶುದ್ಧೋ ಬುದ್ಧಮುಕ್ತಸ್ವಭಾವಃ ಸತ್ಯ ಸೂಕ್ಷ್ಮಃ ಸನ್ವಿಭೂಶ್ಚಾದ್ವಿತೀಯಃ ॥**

ನಿತ್ಯನೂ, ಶುದ್ಧನೂ ಬುದ್ಧ ಮುಕ್ತಸ್ವರೂಪನೂ ಸತ್ಯನೂ, ಸೂಕ್ಷ್ಮನಾಗಿ ವ್ಯಾಪಕನೂ ಅದ್ವಿತೀಯನೂ ಆಗಿದ್ದೇನೆ. ॥೧೬॥

**ಆನಂದಾಬ್ಧಿರ್ಯತ್ಪರಾಃ ಸೋಽಹಮಸ್ಮಿ ಪ್ರತ್ಯಗ್ಧಾತುರ್ನಾತ್ರಸಂಶೀತಿರಸ್ತಿ ॥**

ಆನಂದ ಸಾಗರನಾದ ಪಂಚಕೋಶಗಳ ಒಳಗಿರುವ ಪರಬ್ರಹ್ಮ

ರೂಪ ಪ್ರತ್ಯಗಾತ್ಮನೇ ನಾನಾಗಿದ್ದೇನೆ. ಈ ವಿಷಯದಲ್ಲಿ ಸಂಶಯವಿರುವುದಿಲ್ಲ. ॥೧೭॥

**ಸೋಽಹಮರ್ಕಃ ಪರಂಜ್ಯೋತಿರರ್ಕಜ್ಯೋತಿರಹಂ ಶಿವಃ ।**
**ದ್ವೈತಭಾವ ವಿಮುಕ್ತೋಽಸ್ಮಿ ಸಚ್ಚಿದಾನಂದ ವಿಲಕ್ಷಣಃ ॥**

ಆ ನಾನು ಸೂರ್ಯನು. ಪರಂಜ್ಯೋತಿಯು ಪ್ರಕಾಶಕನು, ಪ್ರಕಾಶ ಮಂಗಳಕರನಾದ ಶಿವನಾದ ನಾನಾಗಿದ್ದೇನೆ. ನಾನು ನೀನು ಅದು ಎಂಬ ಭೇದಭಾವವಿಲ್ಲದ ದ್ವೈತ ವಿಲಕ್ಷಣನಾದ ಸಚ್ಚಿದಾನಂದರೂಪನಾಗಿದ್ದಾನೆ. ॥೧೮॥

**ಶುದ್ಧಬೋಧಸ್ವರೂಪೋಽಹಂ ಕೇವಲೋಽಹಂ ಸದಾಶಿವಃ ।**
**ನಿಷ್ಕ್ರಿಯೋಽಸ್ಮ್ಯವಿಕಾರೋಽಸ್ಮಿ ನಿರ್ಗುಣೋಽಸ್ಮಿ ನಿರಾಕೃತಿಃ ॥**

ನಾನು ಕೇವಲ ಶುದ್ಧಜ್ಞಾನಸ್ವರೂಪನೂ ಸದಾಶಿವನೂ ಆಗಿದ್ದೇನೆ. ನಾನು ಕ್ರಿಯಾರಹಿತನು ವಿಕಾರರಹಿತನು. ಗುಣಾತೀತನು ಆಕಾರರಹಿತನೂ ಆಗಿದ್ದೇನೆ. ॥೧೯॥

**ನಿರ್ವಿಕಲ್ಪೋಽಸ್ಮಿ ನಿತ್ಯೋಽಸ್ಮಿ ನಿರಾಲಂಬೋಽಸ್ಮಿ ನಿರ್ದ್ವಯಃ ।**
**ಕೇವಲಾಖಂಡಬೋಧೋಽಹಂ ಸ್ವಾನಂದೋಽಹಂ ನಿರಂತರಃ ॥**

ನಾನು ನಿರ್ವಿಕಲ್ಪನೂ ನಿತ್ಯನೂ ಆಶ್ರಯರಹಿತನೂ ದ್ವೈತರಹಿತನೂ ಆಗಿದ್ದೇನೆ. ನಾನು ಕೇವಲ ಅಖಂಡ ಜ್ಞಾನದ ಗಟ್ಟಿಯಾಗಿದ್ದೇನೆ. ಹಾಗೂ ಯಾವಾಗಲೂ ಪೂರ್ಣಾನಂದರೂಪನಾಗಿದ್ದೇನೆ. ॥೨೦॥

**ಸತ್ಯಂ ಜ್ಞಾನಮನಂತಂ ಯತ್ಪರಂ ಬ್ರಹ್ಮಾಹಮೇವ ತತ್ ।**
**ಕೇವಲಂ ಚಿತ್ಸದಾನಂದಂ ಬ್ರಹ್ಮೈವಾಹಂ ಜನಾರ್ದನಃ ॥**

ಸತ್ಯ, ಜ್ಞಾನ, ಅನಂತವೆಂಬ ಲಕ್ಷಣಾತ್ಮಕವಾದ ಆ ಪರ ಬ್ರಹ್ಮವೇ ನಾನಾಗಿದ್ದೇನೆ. ಕೇವಲ ಚಿದ್ರೂಪನೂ ಆನಂದರೂಪನಾದ ಜನಾರ್ದನನೆಂಬ ಬ್ರಹ್ಮವೇ ನಾನಾಗಿದ್ದೇನೆ. ॥೨೧॥

**ಅಶುಭಾಶುಭಸಂಕಲ್ಪೈಃ ಸಂಶಾಂತೋಽಸ್ಮಿ ನಿರಾಮಯಃ ॥**

ಶುಭ ಮತ್ತು ಅಶುಭ ಸಂಕಲ್ಪಗಳಿಂದ ರಹಿತನಾದ ದುಃಖರಹಿತ ವಾದ ಆತ್ಮನೇ ನಾನಾಗಿದ್ದೇನೆ. ॥೨೨॥

**ನಷ್ಟೇಷ್ಟಾನಿಷ್ಟಕಲನಃ ಸಂವಿನ್ಮಾತ್ರ ಪರೋಽಸ್ಮ್ಯಹಮ್ ।**
**ಅಂತರ್ಯಾಮ್ಯಹಮಗ್ರಾಹ್ಯೋಽನಿರ್ದೇಶ್ಯೋಽಹಮಲಕ್ಷಣಃ॥**

ಇಷ್ಟ, ಅನಿಷ್ಟಗಳು ನಷ್ಟವಾದದ್ದನ್ನು ನೋಡುವ ಕೇವಲ ಅರು ರೂಪವಾದ ಪರಬ್ರಹ್ಮವೇ ನಾನಾಗಿದ್ದೇನೆ. ನಾನು ಸರ್ವಾಂತರ್ಯಾಮಿಯೂ ಕರ್ಮೇಂದ್ರಿಯಗಳಿಂದ ಹಿಡಿಯಲ್ಪಡದವನೂ ಜ್ಞಾನೇಂದ್ರಿಯಗಳಿಂದ ನಿರ್ದೇಶನ ಮಾಡಲಶಕ್ಯನೂ ಮತ್ತು ಲಕ್ಷಣರಹಿತನೂ ಆಗಿದ್ದೇನೆ. ॥೨೩॥

**ಅದ್ವೈತೋಽಹಮಪೂರ್ವೋಽಹಮಬಾಹ್ಯೋಽಹಮನಂತರಃ ।**
**ಅದ್ವಯಾನಂದ ವಿಜ್ಞಾನಘನೋಽಸ್ಮ್ಯಹಮವಿಕ್ರಿಯಃ ॥**

ನಾನು ಜೀವ, ಬ್ರಹ್ಮ, ಜಗತ್ತೆಂಬ ದ್ವೈತವಿಲ್ಲದವನು. ನನಗೆ ತಂದೆಯು (ಕಾರಣ) ವಿಲ್ಲದವನು. ನನಗಿಂತ ಬೇರೆಕಾರ್ಯವೂ ಇಲ್ಲ;

ನಾನು. ಸೀಮಾರ ಹಿತನೂ ಅದ್ವಯನೂ ಆನಂದನೂ ಅರುವಿನ ಘಟ್ಟಿಯೂ ಅವಿಕಾರಿಯೂ ಆಗಿದ್ದೇನೆ. ॥೨೪॥

ಅವಿದ್ಯಾ ಕಾರ್ಯಹೀನೋಽಹಮವಾಙ್ಮನಸ ಗೋಚರಃ ।
ಆತ್ಮಚೈತನ್ಯರೂಪೋಽಹಮಹಮಾನಂದ ಚಿದ್ಘನಃ ॥

ಮಾತು ಮನಗಳಿಗೆ ಅಗೋಚರನಾದ ನಾನು ಅವಿದ್ಯೆಯ ಕಾರ್ಯವಾದ ಅನಾತ್ಮಗಳಿಲ್ಲದವನಾಗಿದ್ದೇನೆ. ನಾನು ಆತ್ಮಚೈತನ್ಯ ರೂಪನೂ ಆನಂದ ಚಿದ್ಘನನೂ ಆಗಿದ್ದೇನೆ. ॥೨೫॥

ಆಪ್ತ ಕಾಮೋಽಹಮಾಕಾಶಾತ್ಪರಮಾತ್ಮೇಶ್ವರೋಽಸ್ಮ್ಯಹಮ್ ।
ಚಿದಾನಂದೋಽಸ್ಮ್ಯಹಂ ಚೇತಾ ಚಿದ್ಘನ ಚಿನ್ಮಯೋಽ
ಸ್ಮ್ಯಹಮ್ ॥

ನಾನು ಹೊಂದಲ್ಪಟ್ಟ ಕಾಮಗಳುಳ್ಳವನು (ಕಾಮರಹಿತನೂ) ಆಕಾಶಕ್ಕಿಂತಲೂ ಆಚೆ (ಶ್ರೇಷ್ಠ) ಗಿರುವ ಆತ್ಮನೆಂಬ ಈಶ್ವರನೇ ನಾನಾಗಿದ್ದೇನೆ. ನಾನು ಚಿದಾನಂದನೂ ಅರುವಿನ ಗಟ್ಟಿಯಾಗಿ ಎಲ್ಲವನ್ನೂ ಸಾಕ್ಷಿಯಾಗಿ ತಿಳಿಯುವವನು ನಾನಾಗಿದ್ದೇನೆ. ॥೨೬॥

ಜ್ಯೋತಿರ್ಮಯೋಽಸ್ಮ್ಯಹಂ ಜ್ಯಾಯಾನ್ ಜ್ಯೋತಿಷಾಂ
ಜ್ಯೋತಿರಸ್ಮ್ಯಹಮ್ । ನಿತ್ಯೋಽಹಂ ನಿರವದ್ಯೋಽಹಂ
ನಿಷ್ಕ್ರಿಯೋಽಸ್ಮಿ ನಿರಂಜನಃ ॥

ನಾನು ಆಕಾಶದಂತೆ ವ್ಯಾಪಕನೂ ಜ್ಯೋತಿರ್ಮಯನೂ ಸೂರ್ಯಾದಿ ಜ್ಯೋತಿಗಳಿಗೆ ಜ್ಯೋತಿಯೂ ಆಗಿದ್ದೇನೆ. ನಾನು

ನಿತ್ಯನೂ, ನಿರ್ದೋಷನೂ, ನಾಶರಹಿತನೂ ನಿರಂಜನನೂ ನಿಷ್ಕ್ರಿಯನೂ ಆಗಿದ್ದೇನೆ. ।೨೭।।

**ನಿರ್ಮಲೋ ನಿರ್ವಿಕಲ್ಪೋಽಹಂ ನಿರಾಖ್ಯಾತೋಽಸ್ಮಿ ನಿಶ್ಚಲಃ ।**
**ನಿರ್ವಿಕಾರೋ ನಿತ್ಯಪೂತೋ ನಿರ್ಗುಣೋ ನಿಃಸ್ಪೃಹೋಽಸ್ಮ್ಯಹಮ್ ॥**

ಅವಿದ್ಯಾದಿ ಮಲರಹಿತನೂ ರೂಪವಿಲ್ಲದ್ದರಿಂದ ನಿರ್ವಿಕಲ್ಪನೂ ಕೀರ್ತಿರಹಿತನೂ ಕಂಬಾರನ ಅಡಿಗಲ್ಲಿನಂತೆ ನಿಶ್ಚಲನೂ ದೇಹವಿಲ್ಲದ್ದರಿಂದ ನಿರ್ವಿಕಾರನೂ ಜನನಾದಿಗಳಿಲ್ಲದರಿಂದ ನಿತ್ಯ ಪವಿತ್ರನೂ ಪ್ರಕೃತಿಗಿಂತ ಪರವಾಗಿರುವುದರಿಂದ ಗುಣಾತೀತನು ಎಲ್ಲವೂ ನನ್ನಲ್ಲಿ ಕಲ್ಪಿತವಾದ್ದರಿಂದ ಆಶಾರಹಿತನೂ ಆಗಿದ್ದೇನೆ. ।।೨೮।।

**ನಿರಿಂದ್ರಿಯೋ ನಿಯಂತಾಹಂ ನಿರಪೇಕ್ಷೋಽಸ್ಮಿ ನಿಷ್ಕಲಃ ।**
**ಪುರುಷಃ ಪರಮಾತ್ಮಾಹಂ ಪುರಾಣಃ ಪರಮೋಽಸ್ಮ್ಯಹಮ್ ॥**

ನಾನು ಇಂದ್ರಿಯಗಳಿಲ್ಲದವನೂ ಶ್ರೀಕೃಷ್ಣನು ಅರ್ಜುನನ ಕುದರೆಗಳನ್ನು ನಿಯಮಿಸುವಂತೆ ನಾನು ಸರ್ವ ದೇಹೇಂದ್ರಿಯಗಳ ನಿಯಾಮಕನೂ ಪ್ರಾಣಾದಿ ಹದಿನಾರೂ ಕಲೆಗಳಿಲ್ಲದವನೂ ಆಶಾರಹಿತನಾಗಿದ್ದೇನೆ. ನಾನು ಶರೀರವೆಂಬ ಪುರದಲ್ಲಿರುವವನೂ ಯಾವಾಗಲೂ ನೂತನನೂ ಉತ್ಕೃಷ್ಟನೂ ಆದ ಪರಮಾತ್ಮನೇ ನಾನಾಗಿದ್ದೇನೆ. ।।೨೯।।

**ಪೂರ್ಣಾನಂದೈಕ ಬೋಧೋಽಹಂ ಪ್ರತ್ಯಗೇಕರಸೋಽಸ್ಮ್ಯಹಮ್॥ ಪ್ರಜ್ಞಾತೋಽಹಂ ಪ್ರಶಾಂತೋಽಹಂ ಪ್ರಕಾಶಃ ಪರಮೇಶ್ವರಃ ॥**

ನಾನು ಸಾಗರದಂತೆ ಪೂರ್ಣಾನಂದನೂ ಒಬ್ಬನೂ ಜ್ಞಾನರೂಪನೂ ಆಗಿದ್ದೇನೆ. ಮತ್ತು ಒಳಗಡೆ ಏಕರಸನೂ ಆಗಿದ್ದೇನೆ ನಾನು ಸರ್ವಜ್ಞನೂ ದ್ವಂದ್ವಗಳಿಲ್ಲದವನೂ ಪ್ರಕಾಶರೂಪನೂ ಆದ ಪರಮಾತ್ಮನಾಗಿದ್ದೇನೆ. ॥೩೦॥

**ಏಕಧಾ ಚಿಂತ್ಯಮಾನೋಽಹಂ ದ್ವೈತಾದ್ವೈತ ವಿಲಕ್ಷಣಃ ॥ ಶುದ್ಧೋಽಸ್ಮಿ ಶುಕ್ರ ಶಾಂತೋಽಸ್ಮಿ ಶಾಶ್ವತೋಽಸ್ಮಿ ಶಿವೋಽಸ್ಮ್ಯಹಮ್ ॥**

ದ್ವೈತಾ ದ್ವೈತವಿಲಕ್ಷಣನಾದ ನಾನು ಒಂದೇ ಬಗೆಯಾಗಿ ಭಾವಿಸಲು (ನಿದಿಧ್ಯಾಸನ ಮಾಡಲು) ಯೋಗ್ಯನಾಗಿದ್ದೇನೆ ನಾನು ಸಂಸಾರಮಲರಹಿತನೂ ಸ್ವಯಂ ಪ್ರಕಾಶನೂ ಶಾಂತನೂ ಯಾವಾಗಲೂ ಇರುವವನೂ ಮಂಗಳಕರನೂ ಆಗಿದ್ದೇನೆ. ॥೩೧॥

**ಅಹಂ ಸಕೃದ್ವಿಭಾತೋಽಸ್ಮಿ ಸ್ವೇ ಮಹಿಮ್ನಿ ಸದಾ ಸ್ಥಿತಃ । ಸಚ್ಚಿದಾನಂದಮಾತ್ರೋಽಹಂ ಸ್ವಪ್ರಕಾಶೋಽಸ್ಮಿ ಚಿದ್ಘನಃ ॥**

ನಾನು ಒಮ್ಮೆ ಪ್ರಕಾಶಿಸಿದವನಾಗಿದ್ದೇನೆ. ಯಾವಾಗಲೂ ನಾನು ನನ್ನ ಮಹಿಮೆಯಲ್ಲಿರುತ್ತೇನೆ. ನಾನು ಕೇವಲ ಸಚ್ಚಿದಾನಂದಸ್ವರೂ

ತನೂ ಅರುವಿನ ಗಟ್ಟಿಯಾಗಿ ಸ್ವಯಂ ಪ್ರಕಾಶನಾಗಿದ್ದೇನೆ. ॥೩೨॥

ಮಾನಾವಮಾನಹೀನೋಽಸ್ಮಿ ನಿರ್ಗುಣೋಽಸ್ಮಿ ಶಿವೋಽಸ್ಮ್ಯಹಮ್ । ದ್ವೈತಾದ್ವೈತವಿಹೀನೋಽಸ್ಮಿ ದ್ವಂದ್ವಹೀನೋಽಸ್ಮಿ ಸೋಽಸ್ಮ್ಯಹಮ್ ॥

ನಾನು ಮಾನ-ಅಪಮಾನಗಳಿಲ್ಲದವನೂ ನಿರ್ಗುಣನೂ ಶಿವನೂ ಆಗಿದ್ದೇನೆ. ದ್ವೈತ ಮತ್ತು ಅದ್ವೈತಗಳಿಲ್ಲದವನಾಗಿದ್ದೇನೆ. ಸುಖ ದುಃಖಾದಿ ದ್ವಂದ್ವಗಳಿಲ್ಲದವನಾಗಿದ್ದೇನೆ. ॥೩೩॥

ಭಾವಾಭಾವವಿಹೀನೋಽಸ್ಮಿ ಭಾಷಾ ಹೀನೋಽಸ್ಮಿ ಭಾಸ್ಮ್ಯಹಮ್ । ಶೂನ್ಯಾಶೂನ್ಯವಿಹೀನೋಽಸ್ಮಿ ಶೋಭನಾಶೋಭನೋಽಸ್ಮ್ಯಹಮ್ ॥

ನಾನು ಕಾರ್ಯ, ಕಾರಣಗಳಿಲ್ಲದವನಾಗಿದ್ದೇನೆ. ಮತ್ತು ಭಾಷಾ ರಹಿತನಾಗಿ ಬೆಳಗುತ್ತಿದ್ದೇನೆ. ಶೂನ್ಯ ಮತ್ತು ಅಶೂನ್ಯಗಳಿಲ್ಲದವನಾಗಿದ್ದೇನೆ. ಮಂಗಳ ಮತ್ತು ಅಮಂಗಳನೂ ನಾನೇ ಆಗಿದ್ದೇನೆ. ॥೩೪॥

ಸದಸದ್ಭೇದ ಹೀನೋಽಸ್ಮಿ ಸಂಕಲ್ಪರಹಿತೋಽಸ್ಮ್ಯಹಮ್ । ನಾನಾತ್ಮಭೇದಹೀನೋಽಸ್ಮಿ ಹ್ಯಖಂಡಾನಂದ ವಿಗ್ರಹಃ ॥

ನಾನು ಸತ್ ಮತ್ತು ಅಸತ್ತುಗಳೆಂಬ ಭೇದಗಳಿಲ್ಲದವನಾಗಿದ್ದೇನೆ ಮತ್ತು ನಾನು ಸಂಕಲ್ಪಗಳಿಲ್ಲದವನಾಗಿದ್ದೇನೆ. ಆತ್ಮರವೇಕ

ರೆಂಬ ಭೇದವಿಲ್ಲದವನಾಗಿದ್ದೇನೆ. ಅಖಂಡಾನಂದದ ಗಟ್ಟಿಯಾಗಿದ್ದೇನೆ. ॥೩೫॥

ಬಂಧಮೋಕ್ಷವಿಹೀನೋಽಸ್ಮಿ ಶುದ್ಧಂ ಬ್ರಹ್ಮಾಸ್ಮಿ ಸೋಽಸ್ಮ್ಯಹಮ್ । ಚಿತ್ತಾದಿ ಸರ್ವಹೀನೋಽಸ್ಮಿ ಪರಮೋಽಸ್ಮಿ ಪರಾತ್ಪರಃ ॥

ಬಂಧಮೋಕ್ಷಗಳಿಲ್ಲದ ಆ ಶುದ್ಧ ಬ್ರಹ್ಮವೇ ನಾನಾಗಿದ್ದೇನೆ. ಮನಸ್ಸು, ಬುದ್ಧಿ, ಚಿತ್ತ ಮೊದಲಾದ ವೃತ್ತಿಗಳಿಲ್ಲದವನಾಗಿದ್ದೇನೆ. ಸರ್ವೋತ್ಕೃಷ್ಟವಾದ ಪರಬ್ರಹ್ಮನಾಗಿದ್ದೇನೆ. ॥೩೬॥

ಸದಾ ವಿಚಾರರೂಪೋಽಸ್ಮಿ ನಿರ್ವಿಚಾರೋಽಸ್ಮಿ ಸೋಽಸ್ಮ್ಯಹಮ್ । ಧ್ಯಾತೃ ಧ್ಯಾನ ವಿಹೀನೋಽಸ್ಮಿ ಧ್ಯಾನಹೀನೋಽಸ್ಮಿ ಸೋಽಸ್ಮ್ಯಹಮ್ ॥

ಯಾವಾಗಲೂ ವಿಚಾರರೂಪನಾಗಿದ್ದೇನೆ. ಸ್ವತಃ ವಿಚಾರ ರಹಿತನಾಗಿದ್ದೇನೆ. ಧ್ಯಾತೃ-ಧ್ಯಾನಗಳಿಲ್ಲದವನಾಗಿದ್ದೇನೆ. ಧ್ಯಾನರಹಿತವಾದ ಆ ಬ್ರಹ್ಮವೇ ನಾನಾಗಿದ್ದೇನೆ. ॥೩೭॥

ಲಕ್ಷ್ಯಾಲಕ್ಷ್ಯವಿಹೀನೋಽಸ್ಮಿ ಲಯಹೀನರಸೋಽಸ್ಮ್ಯಹಮ್ । ಮಾತೃಮಾನ ವಿಹೀನೋಽಸ್ಮಿ ಮೇಯಹೀನೋ ಶಿವೋಽಸ್ಮ್ಯಹಮ್ ॥

ನಾನು ಲಕ್ಷ್ಯಾಲಕ್ಷ್ಯಗಳಿಲ್ಲದವನಾಗಿದ್ದೇನೆ. ಲಯವಿಲ್ಲದ ರಸ

ರೂಪನಾಗಿದ್ದೇನೆ. ತ್ರಿಪುಟಿರಹಿತನಾಗಿದ್ದೇನೆ. ದೃಶ್ಯವಲ್ಲದ ಶಿವನೇ ನಾನಾಗಿದ್ದೇನೆ. ॥೩೮॥

**ಸರ್ವೇಂದ್ರಿಯ ವಿಹೀನೋಽಸ್ಮಿ ಸರ್ವಕರ್ಮಕೃದಸ್ಮ್ಯಹಮ್ ।**
**ಮುದಿತಾಮುದಿತಾಖ್ಯೋಽಸ್ಮಿ ಸರ್ವಮೌನ ಫಲೋಽಸ್ಮ್ಯಹಮ್ ॥**

ನಾನು ಎಲ್ಲ ಕರ್ಮಗಳನ್ನು ಮಾಡಿದರೂ ಕೂಡ ಸರ್ವ ಜ್ಞಾನ ಮತ್ತು ಕರ್ಮೇಂದ್ರಿಯಗಳಿಲ್ಲದವನಾಗಿದ್ದೇನೆ. ಸುಖ-ದುಃಖಗಳು ನಾನಾಗಿದ್ದೇನೆ. ಸಕಲ ಮೌನಫಲವು ನಾನಾಗಿದ್ದೇನೆ. ॥೩೯॥

**ಷಡ್ವಿಕಾರವಿಹೀನೋಽಸ್ಮಿ ಷಟ್ಕೋಶರಹಿತೋಽಸ್ಮ್ಯಹಮ್ ।**
**ದೇಶಕಾಲವಿಮುಕ್ತೋಽಸ್ಮಿ ದಿಗಂಬರ ಸುಖೋಽಸ್ಮ್ಯಹಮ್ ॥**

ಜನನಾದಿ ಸರ್ವ ವಿಕಾರಗಳಿಲ್ಲದವನಾಗಿದ್ದೇನೆ. ಅಸ್ಥಿ, ನಾಡಿ, ಮಜ್ಜಾ, ಚರ್ಮ, ಮಾಂಸ ರಕ್ತಗಳೆಂಬ ಆರು ಕೋಶಗಳಿಲ್ಲದವನಾಗಿದ್ದೇನೆ. ದೇಶ ಕಾಲಗಳಿಲ್ಲದವನಾದ್ದೇನೆ. ದಿಗಂಬರನೂ ಸುಖರೂಪನೂ ಆಗಿದ್ದೇನೆ. ॥೪೦॥

**ಅಖಂಡಾಕಾಶರೂಪೋಽಸ್ಮಿ ಹ್ಯಖಂಡಾಕಾರಮಸ್ಮ್ಯಹಮ್ ।**
**ಪ್ರಪಂಚಮುಕ್ತಚಿತ್ತೋಽಸ್ಮಿ ಪ್ರಪಂಚರಹಿತೋಽಸ್ಮ್ಯಹಮ್ ॥**

ನಾನು ಅಖಂಡಾಕಾಶರೂಪನಾಗಿದ್ದೇನೆ. ಮತ್ತು ನಾನು ಅಖಂಡಾಕಾರನಾಗಿದ್ದೇನೆ. ನಾನು ಪ್ರಪಂಚಾಕಾರ ರಹಿತವಾದ ಚಿತ್ತವುಳ್ಳವನಾಗಿದ್ದೇನೆ. ಮತ್ತು ಪ್ರಪಂಚರಹಿತನಾಗಿದ್ದೇನೆ. ॥೪೧॥

ಸರ್ವಪ್ರಕಾಶರೂಪೋಽಸ್ಮಿ ಚಿನ್ಮಾತ್ರಜ್ಯೋತಿರಸ್ಮ್ಯಹಮ್ ||
ಕಾಲತ್ರಯವಿಮುಕ್ತೋಽಸ್ಮಿ ಕಾಮಾದಿ ರಹಿತೋಽಸ್ಮ್ಯಹಮ್||

ಸರ್ವವನ್ನು ಬೆಳಗುವ ಪ್ರಕಾಶರೂಪನಾಗಿದ್ದೇನೆ, ಆರುರೂಪ ನಾದ ಜ್ಯೋತಿಯು ನಾನಾಗಿದ್ದೇನೆ. ಭೂತ, ಭವಿಷ್ಯತ್, ವರ್ತಮಾನ ವೆಂಬ ಕಾಲತ್ರಯ ರಹಿತನಾಗಿದ್ದೇನೆ, ಮತ್ತು ಕಾಮಾದಿ ಅರಿಷಡ್ವರ್ಗ ರಹಿತನಾಗಿದ್ದೇನೆ. ||೪೨||

ಮುಕ್ತಿಹೀನೋಽಸ್ಮಿ ಮುಕ್ತೋಽಸ್ಮಿ ಮೋಕ್ಷಹೀನೋಽಸ್ಮ್ಯಹಂ ಸದಾ | ಗಂತವ್ಯ ದೇಶ ಹೀನೋಽಸ್ಮಿ ಗಮನಾದಿ ವಿವರ್ಜಿತಃ ||

ನಾನು ಯಾವಾಗಲೂ ಮುಕ್ತನಾಗಿರುವುದರಿಂದ ಹೊಸ ದಾಗಿ ಮುಕ್ತಿಹೀನನಾಗಿದ್ದೇನೆ. ಹೋಗಲು ಯೋಗ್ಯವಾದ ದೇಶವಿಲ್ಲ ದವನಾದ್ದರಿಂದ ಗಮನಾಗಮನವಿಲ್ಲದವನಾಗಿದ್ದೇನೆ. ||೪೯||

ಸರ್ವದಾ ಸಮರೂಪೋಽಸ್ಮಿ ಶಾಂತೋಽಸ್ಮಿ ಪುರುಷೋತ್ತಮಃ|
ಚಿದಕ್ಷರೋಽಹಂ ಸತ್ಯೋಽಹಂ ವಾಸುದೇವೋಽ ಜರೋಽಮರಃ|

ಯಾವಾಗಲೂ ಸಮರೂಪನಾಗಿದ್ದೇನೆ, ಮತ್ತು ಶಾಂತನಾದ ಪುರುಷೋತ್ತಮನಾಗಿದ್ದೇನೆ, ನಾನು ಚಿದ್ರೂಪನೂ ನಾಶರಹಿತನೂ ತ್ರಿಕಾಲಾಬಾಧ್ಯನೂ ವಾಸುದೇವನೂ ಮುಪ್ಪಿಲ್ಲದವನೂ ಮರಣವಿಲ್ಲದ ದವನಾಗಿದ್ದೇನೆ. ||೪೪||

ಅಹಮೇವಾಕ್ಷರಂ ಬ್ರಹ್ಮ ವಾಸುದೇವಾಖ್ಯಮದ್ವಯಮ್ಃ |
ಪರಬ್ರಹ್ಮಸ್ವರೂಪೋಽಹಂ ಪರಮಾನಂದಮಸ್ಮ್ಯಹಮ್ ||

ನಾನು ನಾಶವಿಲ್ಲದ ತನಗೆರಡನೆಯದಿಲ್ಲದ ವಾಸುದೇವನೆಂಬ ಬ್ರಹ್ಮನಾಗಿದ್ದೇನೆ. ನಾನು ಪರಮಾನಂದರೂಪ ಪರಬ್ರಹ್ಮನಾಗಿದ್ದೇನೆ. ॥೪೫॥

**ಕೇವಲಂ ಸತ್ಯರೂಪೋಽಹಮಹಂ ತ್ಯಕ್ತ್ವಾಹಮಸ್ಮ್ಯಹಮ್**
**ಕೇವಲಂ ಜ್ಞಾನರೂಪೋಽಹಂ ಕೇವಲಂ ಪರಮೋಽಸ್ಮ್ಯಹಮ್ ।**
**ಕೇವಲಂ ಶಾಂತರೂಪೋಽಹಂ ಕೇವಲಂ**
**ಶಾಶ್ವತೋಽಸ್ಮ್ಯಹಮ್ ॥**

ನಾನು ಕೇವಲ ಜ್ಞಾನರೂಪನೂ ಉತ್ಕೃಷ್ಟನೂ ಆಗಿದ್ದೇನೆ. ನಾನು ಕೇವಲ ಶಾಂತರೂಪನೂ ಶಾಶ್ವತನೂ ಆಗಿದ್ದೇನೆ. ಅಹಂಕಾರವನ್ನು ಬಿಟ್ಟು ನಾನು ಕೇವಲ ಸತ್ಯರೂಪನಾಗಿದ್ದೇನೆ. ॥೪೬॥

**ಕೇವಲಂ ತುರ್ಯರೂಪೋಽಸ್ಮಿ ತುರ್ಯಾತೀತೋಽಸ್ಮಿ ಕೇವಲಃ ।**
**ಕೇವಲಾಕಾರ ರೂಪೋಽಸ್ಮಿ ಶುದ್ಧ ರೂಪೋಽಸ್ಮ್ಯಹಂ ಸದಾ ॥**

ನಾನು ಕೇವಲ ತುರ್ಯರೂಪನಾಗಿದ್ದೇನೆ. ಮತ್ತು ಕೇವಲ ತುರ್ಯಾತೀತನಾಗಿದ್ದೇನೆ. ಕೇವಲ ಅಕಾರರೂಪನಾಗಿದ್ದೇನೆ. ನಾನು ಯಾವಾಗಲೂ ಶುದ್ಧ ರೂಪನಾಗಿದ್ದೇನೆ. ॥೪೭॥

**ನಿರ್ವಿಕಲ್ಪ ಸ್ವರೂಪೋಽಸ್ಮಿ ನಿರೀಹೋಽಸ್ಮಿ ನಿರಾಮಯಃ ।**
**ಅಪರಿಚ್ಛಿನ್ನ ರೂಪೋಽಸ್ಮಿ ಹ್ಯನಂತಾನಂದ ರೂಪವಾನ್ ॥**

ನಾನು ನಿರ್ವಿಕಲ್ಪಸ್ವರೂಪನೂ ಆಶಾರಹಿತನೂ ರೋಗ (ದುಃಖ) ರಹಿತನೂ ಆಗಿದ್ದೇನೆ. ನಾನು ಸೀಮಾರಹಿತವಾದ ಆನಂದರೂಪನಾದ್ದರಿಂದ ಪೂರ್ಣರೂಪನಾಗಿದ್ದೇನೆ. ॥೪೮॥

**ಆತ್ಮಾರಾಮ ಸ್ವರೂಪೋಽಸ್ಮಿ ಹ್ಯಹಮಾತ್ಮಾ ಸದಾಶಿವಃ ।**
**ಆದಿ ಮಧ್ಯಾಂತಶೂನ್ಯೋಽಸ್ಮಿ ಹ್ಯಾಕಾಶಸದೃಶೋಽಸ್ಮ್ಯಹಮ್॥**

ನಾನು ಆತ್ಮಾರಾಮಸ್ವರೂಪನೂ ಸದಾಶಿವನೂ ಆಗಿದ್ದೇನೆ. ನಾನು ಜನನ, ಮರಣಗಳಿಲ್ಲದವನಾಗಿದ್ದೇನೆ. ಮತ್ತು ಆಕಾಶದಂತೆ ನಿರಾಕಾರನಾಗಿದ್ದೇನೆ. ॥೪೯॥

**ನಿತ್ಯ ಶುದ್ಧ ಚಿದಾನಂದಃ ಸತ್ತಾಮಾತ್ರೋಽಹಮವ್ಯಯಃ ।**
**ನಿತ್ಯ ಬುದ್ಧ ವಿಶುದ್ಧೈಕಃ ಸಚ್ಚಿದಾನಂದಮಸ್ಮ್ಯಹಮ್ ॥**

ನಾನು ನಿತ್ಯ ಶುದ್ಧನೂ ಚಿದಾನಂದನೂ ಕೇವಲ ಸದ್ರೂಪನೂ ಅವ್ಯಯನೂ ಆಗಿದ್ದೇನೆ. ನಾನು ನಿತ್ಯ ಬುದ್ಧನೂ ವಿಶುದ್ಧನೂ ಏಕನೂ ಸಚ್ಚಿದಾನಂದನೂ ಆಗಿದ್ದೇನೆ. ॥೫೦॥

**ಭೂಮಾನಂದ ಸ್ವರೂಪೋಽಸ್ಮಿ ಭಾಷಾಹೀನೋಽಸ್ಮ್ಯಹಂ ಸದಾ । ಸರ್ವಾಧಿಷ್ಠಾನ ರೂಪೋಽಸ್ಮಿ ಸರ್ವದಾ**
**ಚಿದ್ಘನೋಽಸ್ಮ್ಯಹಮ್ ॥**

ನಾನು ಯಾವಾಗಲೂ ಪೂರ್ಣಾನಂದ ಸ್ವರೂಪನಾಗಿದ್ದೇನೆ. ಮತ್ತು ನಾನು ಭಾಷಾ (ಶಬ್ದ) ರಹಿತನಾಗಿದ್ದೇನೆ. ನಾನು ಯಾವಾ

ಗಲೂ ಅರುವಿನ ಗಟ್ಟಿಯೂ ಸರ್ವಾಧಿಷ್ಠಾನರೂಪನೂ ಆಗಿದ್ದೇನೆ. ॥೫೧॥

**ಚಿತ್ತ ವೃತ್ತಿ ವಿಹೀನೋಽಹಂ ಚಿದಾತ್ಮೈಕ್ಯ ರಸೋಽಸ್ಮ್ಯಹಮ್।**
**ಅಹಂ ಬ್ರಹ್ಮೈವ ಸರ್ವಂ ಸ್ಯಾದಹಂ ಚೈತನ್ಯಮೇವ ಹಿ ॥**

ನಾನು ಬುದ್ಧಿ ವೃತ್ತಿಗಳಿಲ್ಲದವನಾಗಿದ್ದೇನೆ. ಮತ್ತು ಆನಂದ ರಸವೆಂಬ ಬ್ರಹ್ಮವೇ ನಾನಾಗಿದ್ದೇನೆ. ನಾನು ಮತ್ತು ಸರ್ವವೂ ಬ್ರಹ್ಮವೆ. ನಾನು ಚೇತನರೂಪನಾಗಿದ್ದೇನೆ. ॥೫೨॥

**ಅಹಮೇವಾಹಮೇವಾಸ್ಮಿ ಭೂಮಾಕಾರಸ್ವರೂಪವಾನ್ ।**
**ಅಹಮೇವ ಮಹಾನಾತ್ಮಾ ಹ್ಯಹಮೇವ ಪರಾತ್ಪರಃ ॥**

ನಾನು ನಾನೇ ಆಗಿದ್ದೇನೆ. ಮಹತ್ತಿಗಿಂತಲೂ ಮಹತ್ತಾಗಿದ್ದೇನೆ. ನಾನೇ ದೊಡ್ಡ ಆತ್ಮನು ನಾನೇ ಮಾಯೆಗಿಂತ ಆಚೆಗಿದ್ದೇನೆ. ॥೫೩॥

**ಅಹಮನ್ಯವದಾಭಾಮಿ ಹ್ಯಹಮೇವ ಶರೀರವತ್ । ಅಹಂ ಶಿಷ್ಯವದಾಭಾಮಿ ಹ್ಯಹಂ ಲೋಕತ್ರಯಾಶ್ರಯಃ ॥**

ಹಗ್ಗವು ಹಾವಾಗಿ ಕಂಡಂತೆ ನಾನೇ ಜಗದಾಕಾರವಾಗಿಯೂ ಶರೀರದಂತೆಯೂ ಕಂಡುಬರುತ್ತಿದ್ದೇನೆ. ನಾನು ಮೂರು ಲೋಕಗಳಿಗೆ ಆಶ್ರಯನು. ನಾನು ಶಿಷ್ಯನಂತೆ ಕಂಡುಬರುತ್ತಿದ್ದೇನೆ ॥೫೪॥

**ಅಹಂ ಕಾಲತ್ರಯಾತೀತೋ ಹ್ಯಹಂ ವೇದೈರುಪಾಸಿತಃ । ಅಹಂ ಶಾಸ್ತ್ರೇಣ ನಿರ್ಣೀತ ಅಹಂ ಚಿತ್ತೇ ವ್ಯವಸ್ಥಿತಃ ॥**

ಜನ್ಮವಿಲ್ಲದ್ದರಿಂದ ನಾನು ಭೂತಾದಿ ಕಾಲಗಳನ್ನು ದಾಟಿದ್ದೇನೆ, ಮತ್ತು ಎಲ್ಲ ವೇದಗಳು ಏಕ ಮುಖವಾಗಿ ನನ್ನ ಸ್ವರೂಪವನ್ನೇ ಪ್ರತಿಪಾದಿಸುತ್ತವೆ. ನಾನು ಶಾಸ್ತ್ರದಿಂದ ಬ್ರಹ್ಮವೆಂದು ನಿರ್ಣಯಿಸಲ್ಪಟ್ಟಿದ್ದೇನೆ. ನಾನು ಸರ್ವರ ಹೃದಯದಲ್ಲಿದ್ದೇನೆ, ॥೫೫॥

**ಆನಂದಘನ ಏವಾಹಮಹಂ ಬ್ರಹ್ಮಾಸ್ಮಿ ಕೇವಲಂ । ಆತ್ಮಾನಾತ್ಮನಿ ತೃಪ್ತೋಽಸ್ಮ್ಯರೂಪೋ ಹ್ಯಹಮವ್ಯಯಃ ॥**

ನಾನು ಕೇವಲ ಆನಂದ ಘನವಾದ ಬ್ರಹ್ಮವೇ ಆಗಿದ್ದೇನೆ, ನಾನು ಆತ್ಮಾನಾತ್ಮ ವಿಚಾರದಲ್ಲಿ ತೃಪ್ತನಾಗಿದ್ದೇನೆ. ನಾನು ರೂಪರಹಿತನೂ ಅವ್ಯಯನೂ ಆಗಿದ್ದೇನೆ. ॥೫೬॥

**ಆಕಾಶಾದಪಿ ಸೂಕ್ಷ್ಮೋಽಹಂ ಅಹಮಾದ್ಯಂತಾಭಾವವಾನಹಮ್ । ಸತ್ತಾಮಾತ್ರಸ್ವರೂಪೋಽಹಂ ಶುದ್ಧಮೋಕ್ಷಸ್ವರೂಪವಾನ್ ॥**

ನಾನು ಆಕಾಶಕ್ಕಿಂತಲೂ ಸೂಕ್ಷ್ಮನಾಗಿದ್ದಾನೆ. ನಾನು ಜನ್ಮಮರಣಗಳಿಲ್ಲದವನಾಗಿದ್ದೇನೆ. ನಾನು ಕೇವಲ ಸದ್ರೂಪನಾಗಿದ್ದೇನೆ. ನಾನು ಶುದ್ಧ ಮೋಕ್ಷಸ್ವರೂಪನಾಗಿದ್ದೇನೆ ॥೫೭॥

**ಸತ್ಯಾನಂದ ಸ್ವರೂಪೋಽಹಂ ಜ್ಞಾನಾನಂದ ಘನೋಽಸ್ಮ್ಯಹಮ್ । ನಾಮ ರೂಪ ವಿಮುಕ್ತೋಽಹಮಹಮಾನಂದ ವಿಗ್ರಹಃ ॥**

ನಾನು ಸತ್ಯ ಆನಂದಸ್ವರೂಪನೂ ಜ್ಞಾನಾನಂದಘನನೂ ಆಗಿದ್ದೇನೆ. ಆಕಾರವಿಲ್ಲದ್ದರಿಂದ ನಾನು ನಾಮರೂಪುಗಳಿಲ್ಲದವನೂ ಆನಂದ ಸ್ವರೂಪನೂ ಆಗಿದ್ದೇನೆ. ॥೫೮॥

**ಆದಿಚೈತನ್ಯ ಮಾತ್ರೋऽಹಮಹಮಖಂಡೈಕರಸೋऽಸ್ಮ್ಯಹಮ್ । ಸರ್ವತ್ರ ಪೂರ್ಣರೂಪೋऽಹಂ ಪರಾಮೃತರಸೋऽಸ್ಮ್ಯಹಮ್ ॥**

ನಾನು ಕೇವಲ ಪುರಾತನವಾದ ಚೈತನ್ಯನೂ ಅಖಂಡೈಕರಸನೂ ಆಗಿದ್ದೇನೆ. ನಾನು ಎಲ್ಲ ಕಡೆಗೂ ಪೂರ್ಣರೂಪನೂ ಬ್ರಹ್ಮಾನಂದವೆಂಬ ಅಮೃತ ರಸವಾಗಿದ್ದೇನೆ. ॥೫೯॥

**ಏಕಾಮೇವಾದ್ವಿತೀಯಂ ಸದ್ಬ್ರಹ್ಮೈವಾಹಂ ನ ಸಂಶಯಃ । ಅಹಮೇವ ಪರಂ ಬ್ರಹ್ಮ ಹ್ಯಹಮೇವ ಗುರೋರ್ಗುರುಃ ॥**

ನಾನು ಸ್ವಗತಾದಿ ಭೇದಗಳಿಲ್ಲದ ಸದ್ರೂಪವಾದ ಬ್ರಹ್ಮವೇ ಆಗಿದ್ದೇನೆ. ಈ ವಿಷಯದಲ್ಲಿ ಸಂಶಯವಿರುವುದಿಲ್ಲ. ನಾನೇ ಪರಬ್ರಹ್ಮನು ಹಾಗೂ ಗುರುವಿಗೂ ಗುರುವಾಗಿದ್ದೇನೆ. ॥೬೦॥

**ಸರ್ವತ್ರ ಪೂರ್ಣರೂಪೋऽಹಂ ಪರಾಮೃತರಸೋऽಸ್ಮ್ಯಹಮ್ । ಏಕಾಮೇವಾದ್ವಿತೀಯಂ ಸದ್ಬ್ರಹ್ಮೈವಾಹಂ ನ ಸಂಶಯಃ ॥**

ಎಲ್ಲ ದೇಶ, ಕಾಲ, ವಸ್ತುಗಳಲ್ಲಿ ಪರಿಪೂರ್ಣನಾಗಿದ್ದೇನೆ. ಉತ್ಕೃಷ್ಟವಾದ ರಸರೂಪನಾಗಿದ್ದೇನೆ. ಸ್ವಗತಾದಿ ಭೇದರಹಿತವಾದ

ಸದ್ರೂಪ ಬ್ರಹ್ಮವೇ ಆಗಿದ್ದೇನೆ. ಈ ವಿಷಯದಲ್ಲಿ ಸಂಶಯವಿಲ್ಲ. ॥೬೧॥

**ಅಹ ಮೇವ ಪರಂ ಬ್ರಹ್ಮ ಹ್ಯಹಮೇವ ಗುರುರ್ಗುರೋಃ ।**
**ಸರ್ವಜ್ಞಾನಪ್ರಕಾಶೋಽಸ್ಮಿ ಮುಖ್ಯವಿಜ್ಞಾನ ವಿಗ್ರಹಃ ॥**

ನಾನು ಪರಬ್ರಹ್ಮ ಆಗಿದ್ದೇನೆ. ನಾನೇ ಗುರುವಿಗೂ ಕೂಡ ಗುರುವಾಗಿರುವೆ. ಸರ್ವವೃತ್ತಿಗಳನ್ನು ಪ್ರಕಾಶಮಾಡುವ ಜ್ಞಾನರೂಪನೂ ಹಾಗೂ ಮುಖ್ಯ ವಿಜ್ಞಾನಸ್ವರೂಪನೂ ನಾನಾಗಿದ್ದೇನೆ. ॥೬೨॥

**ತುರ್ಯಾತುರ್ಯಪ್ರಕಾಶೋಽಸ್ಮಿ ತುರ್ಯಾದಿ ವರ್ಜಿತಃ ।**
**ದೃಶಿಸ್ವರೂಪಂ ಗಗನೋಪಮಂ ಪರಂ ಸಕೃದ್ವಿಭಾತತ್ತ್ವ ಅಜಮೇಕಮಕ್ಷರಮ್ ॥**

ಜಾಗ್ರದಾದಿಗಳನ್ನೂ ತುರ್ಯವನ್ನು ಪ್ರಕಾಶಿಸುವವನಾಗಿದ್ದೇನೆ. ಮತ್ತು ಜಾಗ್ರದಾದಿ ನಾಲ್ಕು ಅವಸ್ಥೆಗಳಿಲ್ಲದವನಾಗಿದ್ದೇನೆ. ಆಕಾಶದಂತಿರುವ ನಾನು ದೃಕ್‌ಸ್ವರೂಪನೂ ಜನ್ಮರಹಿತನೂ, ಏಕನೂ, ನಾಶರಹಿತನು ವೃತ್ತಿಗಳ ಸಂಧಿಯಲ್ಲಿ ಪ್ರಕಟವಾಗುವವನಾಗಿದ್ದೇನೆ. ॥೬೩॥

**ಅಲೇಪಕಂ ಸರ್ವಗತಂ ಯದದ್ವಯಂ ತದೇವ ಚಾಹಂ ಸಕಲಂ ವಿಮುಕ್ತ ಓಮ್ ॥**

ಪುಣ್ಯ-ಪಾಪಗಳ ಲೇಪವಿಲ್ಲದ, ಪೂರ್ಣವಾದ, ಯಾವುದು ತನಗಿಂತಲೂ ಬೇರೆಯಿಲ್ಲದ್ದಾಗಿಯೋ, ಅದುವೇ ನಾನಾಗಿದ್ದೇನೆ.

**ಅಹಂ ಬ್ರಹ್ಮಾಽಸ್ಮಿ ಮಂತ್ರೋಽಯಂ ಜನ್ಮಪಾಪಂ ವಿನಾಶ ಯೇತ್ । ಅಹಂ ಬ್ರಹ್ಮಾಽಸ್ಮಿ ಮಂತ್ರೋಽಯಂ ಭೇದಬುದ್ಧಿಂ ವಿನಾಶಯೇತ್ । ಅಹಂ ಬ್ರಹ್ಮಾಽಸ್ಮಿ ಮಂತ್ರೋಽಯಂ ಕೋಟಿ ದೋಷಂ ವಿನಾಶಯೇತ್ । ಅಹಂ ಬ್ರಹ್ಮಾಽಸ್ಮಿ ಮಂತ್ರೋಽಯಂ ಜ್ಞಾನಾನಂದಂ ಪ್ರಯಚ್ಛತಿ ।**

'ಅಹಂ ಬ್ರಹ್ಮಾಸ್ಮಿ' ನಾನೇ ಬ್ರಹ್ಮವೆಂಬ ಈ ಮಂತ್ರವು ಜನ್ಮಕ್ಕೆ ಕಾರಣವಾದ ಪಾಪವನ್ನು ಭೇದ ಬುದ್ಧಿಯನ್ನೂ ಕೋಟಿದೋಷ ಗಳನ್ನೂ ನಾಶಮಾಡುತ್ತದೆ. ಮತ್ತು ನಾನೇ ಬ್ರಹ್ಮವೆಂಬ ಈ ಮಂತ್ರವು ಜ್ಞಾನ, ಮತ್ತು ಆನಂದಗಳನ್ನುಂಟುಮಾಡುತ್ತದೆ. ॥೬೯॥

**ಸರ್ವ ಮಂತ್ರಾನ್ಸಮುತ್ಸೃಜ್ಯ ಇಮಂ ಮಂತ್ರಂ ಸಮಭ್ಯಸೇತ್ ಸದ್ಯೋ ಮೋಕ್ಷಮವಾಪ್ನೋತಿ ನಾಸ್ತಿ ಸಂದೇಹ ಮಣ್ವಪಿ । ।**

ಸಕಲ ಮಂತ್ರಗಳನ್ನು ಬಿಟ್ಟು ಈ ಮಂತ್ರವನ್ನು ಗುರುಮುಖ ದಿಂದ ಚನ್ನಾಗಿ ಅಭ್ಯಾಸಮಾಡಬೇಕು. ಅವನು ತಡವಿಲ್ಲದೆ ಮುಕ್ತಿ ಯನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ಸ್ವಲ್ಪವಾದರೂ ಸಂಶ ಯವಿರುವುದಿಲ್ಲ. ॥೭೫॥

ಸ್ವಾನುಭವದ ವಾಕ್ಯಗಳು.

**ಒಂಭತ್ತನೇ ಪ್ರಕರಣವು ಮುಗಿಯಿತು**

## ಸಮಾಧಿ ವಾಕ್ಯಗಳು

**ಜೀವಾತ್ಮಾ ಪರಮಾತ್ಮೈಕ್ಯಾವಸ್ಥಾ ತ್ರಿಪುಟಿರಹಿತಾಪರಮಾನಂದ ಸ್ವರೂಪಾ ಶುದ್ಧ ಚೈತನ್ಯಾತ್ಮಿಕಾ ಸಮಾಧಿಃ ॥**

ಜೀವಾತ್ಮ ಮತ್ತು ಪರಮಾತ್ಮರ ಐಕ್ಯಾವಸ್ಥೆಯೇ ಸಮಾಧಿಯು ಮತ್ತು ಜ್ಞಾತೃ, ಜ್ಞಾನ, ಜ್ಞೇಯವೆಂಬ ತ್ರಿಪುಟಿಯಿಲ್ಲದ ಪರಮಾನಂದ ರೂಪವಾದ ಶುದ್ಧಚೈತನ್ಯರೂಪದಿಂದಿರುವುದೇ ಸಮಾಧಿಯು ॥೧॥

**ಧ್ಯಾತೃಧ್ಯಾನೇ ವಿಹಾಯ ನಿವಾತಸ್ಥಿತದೀಪವದ್ಧ್ಯೇಯೈಕ ಗೋಚರಂ ಚಿತ್ತಂ ಸಮಾಧಿಃ ॥**

ಧ್ಯಾತೃ, ಧ್ಯೇಯಗಳೆಂಬ ಭೇದವನ್ನು ಬಿಟ್ಟು ಗಾಳಿಯಿಲ್ಲದ ಸ್ಥಳದಲ್ಲಿಡಲ್ಪಟ್ಟ ದೀಪದಂತೆ ಮನವು ಕೇವಲ ಧ್ಯೇಯ ರೂಪವಾಗಿರುವುದೇ ಸಮಾಧಿಯು, ॥೨॥

**ವೃತ್ತಿ ಶೂನ್ಯಂ ಮನಃ ಪರಮಾತ್ಮನಿ ಲೀನಂ ಭವತಿ ।**

ವೃತ್ತಿಗಳಿಲ್ಲದ ಮನವು ಪರಮಾತ್ಮನಲ್ಲಿ ಲಯವಾಗುತ್ತದೆ. ॥೨॥

**ಪ್ರಾಪ್ತೇ ಜ್ಞಾನೇನ ವಿಜ್ಞಾನೇ ಜ್ಞೇಯೇ ಪರಮಾತ್ಮನಿ ಹೃದಿ ಸಂಸ್ಥಿತೇ ದೇಹೇ ಲಬ್ಧಶಾಂತಿಪದಂ ಗತೇ ತದಾ ಪ್ರಭಾ ಮನೋ ಬುದ್ಧಿಶೂನ್ಯಂ ಭವತಿ ॥**

ಶಾಸ್ತ್ರ ಜ್ಞಾನದಿಂದ ಅನುಭವ ಜ್ಞಾನವು ಬರುತ್ತಿರಲು ಯಾವಾಗ ಮನುಷ್ಯನಿಗೆ ದೇಹದ ಮಧ್ಯದಲ್ಲಿ ಪರ ಮಾತ್ಮ ನಿದ್ದಾನೆಂಬ ಅನುಭವವು ಬರುತ್ತದೆಯೋ, ಆಗ ಶಾಂತಿ ಪದ ವನ್ನು ಪಡೆಯುತ್ತಾ ಮನೋ, ಬುದ್ಧಿ ಗಳಿಲ್ಲದವನಾ ಗುತ್ತಾನೆ. ॥೩॥

ಪ್ರಾಣಾಪಾನಯೋ ರೈಕ್ಯಂ ಕೃತ್ವಾಧೃತಕುಂಭಕೋ ।
ನಾಸಾಗ್ರದರ್ಶನ ದೃಢಭಾವನಯಾ ದ್ವಿಕರಾಂಗುಲಿಭಿಃ
ಷಣ್ಮುಖೀ ಕರಣೇನ ಪ್ರಣವಧ್ವನಿಂ ನಿಶಮ್ಯ ಮನಸ್ತತ್ರ ಲೀನಂ ಭವತಿ ॥

ಪ್ರಾಣ ಮತ್ತು ಅಪಾನಗಳನ್ನು ಒಂದು ಗೂಡಿಸಿ, ಕುಂಭಕವನ್ನು ಮಾಡಿ, ಮುಗಿನಕೊನೆಯನ್ನು ದೃಢ ಭಾವನೆಯಿಂದ ನೋಡುತ್ತಾ ಎರಡು ಕೈಗಳ ಬೆರಳುಗಳಿಂದ ಎರಡು ಬೆರಳುಗಳಿಗಂದ ಮುಗಿನ ಹೊಳ್ಳೆ ಗಳನ್ನು ಎರಡು ಬೆರಳುಗಳಿಂದ ಕಣ್ಣುಗಳನ್ನು ಎರಡು ಬೆರಳುಗಳಿಂದ ಕಿವಿಗಳನ್ನು ಮುಚ್ಚಿಕೊಂಡು ಓಂಕಾರದ ಧ್ವನಿಯನ್ನು ಕೇಳುತ್ತಾ ಮನವು ಆ ಧ್ಯಾನದಲ್ಲಿ ಲೀನವಾಗುವುದು ಸಮಾಧಿಯು ॥೪॥

**ಪಯಃ ಸ್ರವಾನಂತರಂ ಧೇನುಸ್ತನಕ್ಷೀರಮಿವ ಸರ್ವೇಂದ್ರಿಯ ವರ್ಗೇ ಪರಿನಷ್ಟೇ ಮನೋ ನಾಶೋ ಭವತಿ ॥**

**ಕರುಹಾಕಿ ಕೆಲವು ತಿಂಗಳುಗಳ ವರೆಗೆ ಹಾಲು ಹಿಂಡಿ ಒದ್ದ ಆಕಳ ಮಲೆಯಲ್ಲಿ ಹಾಲು ಒಣಗುವಂತೆ ಯಾವನ ಸರ್ವ ಇಂದ್ರಿಯ ಗಳು ನಾಶವಾಗುತ್ತವೆಯೋ, ಅವನ ಮನವು ನಾಶವಾಗುತ್ತದೆ. ॥೫॥**

ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ ।
ಬುದ್ಧಿಶ್ಚ ನ ವಿಚೇಷ್ಟತಿ ತಾಮಾಹುಃ ಪರಮಾಂ ಗತಿಮ್ ॥

ಯಾವಾಗ ಮನದೊಡಗೂಡಿದ ಶ್ರೋತ್ರಾದಿ ಜ್ಞಾನೇಂದ್ರಿಯಗಳು ನಿಲ್ಲುತ್ತವೆಯೋ, ಮತ್ತು ಬುದ್ಧಿಯು ಚೇಷ್ಟೆಮಾಡುವುದಿಲ್ಲವೋ, ಅದನ್ನೇ ಪರಮ ಗತಿಯೆಂದು ಹೇಳುತ್ತಾರೆ. ॥೬॥

ಸಂಶಾಂತ ಸರ್ವಸಂಕಲ್ಪಾ ಯಾ ಶಿಲಾವದವಸ್ಥಿತಿಃ ।
ಜಾಗ್ರನ್ನಿದ್ರಾವಿನಿರ್ಮುಕ್ತಾ ಸಾ ಸ್ವರೂಪಾವಸ್ಥಿತಿಃ ಪರಾ

ಮನದಲ್ಲಿರುವ ಸರ್ವಸಂಕಲ್ಪಗಳು ಶಾಂತವಾಗಿ ಕಲ್ಲಿನಂತೆ ಅಚಲವಾಗಿರುವುದೇ ಸಮಾಧಿಯು ಜಾಗ್ರತ್-ಸ್ವಪ್ನ ಮತ್ತು ನಿದ್ರೆಗಳಿಲ್ಲದೆ ಸ್ವರೂಪದಲ್ಲಿರುವುದೇ ಸಮಾಧಿಯು ಅದು ಶ್ರೇಷ್ಠವಾದದ್ದು ॥೭॥

ಮಾರುತೇ ಮಧ್ಯಸಂಚಾರೇ ಮನಃ ಸ್ಥೈರ್ಯಂ ಪ್ರಜಾಯತೇ ॥

ಯಾವಾಗ ಪ್ರಾಣವಾಯುವು ಈಡಾ ಮತ್ತು ಪಿಂಗಳೆಗಳನ್ನು ಬಿಟ್ಟು ಸುಷುಮ್ನಾ ನಾಡಿಯಲ್ಲಿ ಸಂಚರಿಸುತ್ತದೆಯೋ, ಆಗ ಮನಸ್ಸಿಗೆ ಸ್ಥಿರತ್ವವು ಉಂಟಾಗುತ್ತದೆ. ಮನವು ಸ್ಥಿರವಾಗುತ್ತದೆ. ॥೮॥

ಯೋ ಮನಃ ಸುಸ್ಥಿರಿಭಾವಃ ಸೈವಾವಸ್ಥಾ ಮನೋನ್ಮನಿ ।

ಯಾವ ಮನದ ಸ್ಥಿರತ್ವವಿದೆಯೋ, ಅದಕ್ಕೆ ಮನೋನ್ಮನಿ ಅವಸ್ಥಾ ಎನ್ನುತ್ತಾರೆ. (ಉನ್ಮನಿ) ಮನವು ವಿಷಯಗಳಿಂದ ವಿಮುಖವಾಗುವುದು ॥೯॥

ಶಾಸ್ತ್ರ ಜ್ಞಾನದಿಂದ ಅನುಭವ ಜ್ಞಾನವು ಬರುತ್ತಿರಲು ಯಾವಾಗ ಮನುಷ್ಯನಿಗೆ ದೇಹದ ಮಧ್ಯದಲ್ಲಿ ಪರ ಮಾತ್ಮ ನಿದ್ದಾನೆಂಬ ಅನುಭವವು ಬರುತ್ತದೆಯೋ, ಆಗ ಶಾಂತಿ ಪದ ವನ್ನು ಪಡೆಯುತ್ತಾ ಮನೋ, ಬುದ್ಧಿಗಳಿಲ್ಲದವನಾ ಗುತ್ತಾನೆ. ॥೩॥

ಪ್ರಾಣಾಪಾನಯೋ ರೈಕ್ಯಂ ಕೃತ್ವಾಧೃತಕುಂಭಕೋ ।
ನಾಸಾಗ್ರದರ್ಶನ ದೃಢಭಾವನಯಾ ದ್ವಿಕರಾಂಗುಲಿಭಿಃ
ಷಣ್ಮುಖೀ ಕರಣೇನ ಪ್ರಣವಧ್ವನಿಂ ನಿಶಮ್ಯ ಮನಸ್ತತ್ರ ಲೀನಂ ಭವತಿ ॥

ಪ್ರಾಣ ಮತ್ತು ಅಪಾನಗಳನ್ನು ಒಂದು ಗೂಡಿಸಿ, ಕುಂಭಕವನ್ನು ಮಾಡಿ, ಮುಗಿನಕೊನೆಯನ್ನು ದೃಢ ಭಾವನೆಯಿಂದ ನೋಡುತ್ತಾ ಎರಡು ಕೈಗಳ ಬೆರಳುಗಳಿಂದ ಎರಡು ಬೆರಳುಗಳಿಗಂದ ಮುಗಿನ ಹೊಳ್ಳೆ ಗಳನ್ನು ಎರಡು ಬೆರಳುಗಳಿಂದ ಕಣ್ಣುಗಳನ್ನು ಎರಡು ಬೆರಳುಗಳಿಂದ ಕಿವಿಗಳನ್ನು ಮುಚ್ಚಿಕೊಂಡು ಓಂಕಾರದ ಧ್ವನಿಯನ್ನು ಕೇಳುತ್ತಾ ಮನವು ಆ ಧ್ಯಾನದಲ್ಲಿ ಲೀನವಾಗುವುದು ಸಮಾಧಿಯು ॥೪॥

**ಪಯಃ ಸ್ರವಾನಂತರಂ ಧೇನುಸ್ತನಕ್ಷೀರಮಿವ ಸರ್ವೇಂದ್ರಿಯ ವರ್ಗೇ ಪರಿನಷ್ಟೇ ಮನೋ ನಾಶೋ ಭವತಿ ॥**

**ಕರುಹಾಕಿ ಕೆಲವು ತಿಂಗಳುಗಳ ವರೆಗೆ ಹಾಲು ಹಿಂಡಿ ಒದ್ದ ಆಕಳ ಮಲೆಯಲ್ಲಿ ಹಾಲು ಒಣಗುವಂತೆ ಯಾವನ ಸರ್ವ ಇಂದ್ರಿಯ ಗಳು ನಾಶವಾಗುತ್ತವೆಯೋ, ಅವನ ಮನವು ನಾಶವಾಗುತ್ತದೆ. ॥೫॥**

ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ ।
ಬುದ್ಧಿಶ್ಚ ನ ವಿಚೇಷ್ಟತಿ ತಾಮಾಹುಃ ಪರಮಾಂ ಗತಿಮ್ ॥

ಯಾವಾಗ ಮನದೊಡಗೂಡಿದ ಶ್ರೋತ್ರಾದಿ ಜ್ಞಾನೇಂದ್ರಿಯಗಳು ನಿಲ್ಲುತ್ತವೆಯೋ, ಮತ್ತು ಬುದ್ಧಿಯು ಚೇಷ್ಟೆಮಾಡುವುದಿಲ್ಲವೋ, ಅದನ್ನೇ ಪರಮ ಗತಿಯೆಂದು ಹೇಳುತ್ತಾರೆ. ॥೬॥

ಸಂಶಾಂತ ಸರ್ವಸಂಕಲ್ಪಾ ಯಾ ಶಿಲಾವದವಸ್ಥಿತಿಃ ।
ಜಾಗ್ರನ್ನಿದ್ರಾವಿನಿರ್ಮುಕ್ತಾ ಸಾ ಸ್ವರೂಪಾವಸ್ಥಿತಿಃ ಪರಾ

ಮನದಲ್ಲಿರುವ ಸರ್ವಸಂಕಲ್ಪಗಳು ಶಾಂತವಾಗಿ ಕಲ್ಲಿನಂತೆ ಅಚಲವಾಗಿರುವುದೇ ಸಮಾಧಿಯು ಜಾಗ್ರತ್-ಸ್ವಪ್ನ ಮತ್ತು ನಿದ್ರೆಗಳಿಲ್ಲದೆ ಸ್ವರೂಪದಲ್ಲಿರುವುದೇ ಸಮಾಧಿಯು ಅದು ಶ್ರೇಷ್ಠವಾದದ್ದು ॥೭॥

ಮಾರುತೇ ಮಧ್ಯಸಂಚಾರೇ ಮನಃ ಸ್ಥೈರ್ಯಂ ಪ್ರಜಾಯತೇ ॥

ಯಾವಾಗ ಪ್ರಾಣವಾಯುವು ಈಡಾ ಮತ್ತು ಪಿಂಗಳೆಗಳನ್ನು ಬಿಟ್ಟು ಸುಷುಮ್ನಾ ನಾಡಿಯಲ್ಲಿ ಸಂಚರಿಸುತ್ತದೆಯೋ, ಆಗ ಮನಸ್ಸಿಗೆ ಸ್ಥಿರತ್ವವು ಉಂಟಾಗುತ್ತದೆ. ಮನವು ಸ್ಥಿರವಾಗುತ್ತದೆ. ॥೮॥

ಯೋ ಮನಃ ಸುಸ್ಥಿರೀಭಾವಃ ಸೈವಾವಸ್ಥಾ ಮನೋನ್ಮನಿ ।

ಯಾವ ಮನದ ಸ್ಥಿರತ್ವವಿದೆಯೋ, ಅದಕ್ಕೆ ಮನೋನ್ಮನಿ ಅವಸ್ಥಾ ಎನ್ನುತ್ತಾರೆ. (ಉನ್ಮನಿ) ಮನವು ವಿಷಯಗಳಿಂದ ವಿಮುಖವಾಗುವುದು ॥೯॥

**ಸ್ವರೂಪೋಽಸೌ ಮನೋನಾಶೋ ಜೀವನ್ಮುಕ್ತಸ್ಯ ವಿದ್ಯತೇ ॥**

ಮನೋನಾಶವು ಜೀವನ್ಮುಕ್ತನ ಸ್ವರೂಪವಾಗಿದೆ ॥೧೦॥

**ನಿದ್ರಾಖ್ಯರೂಪನಾಶಸ್ತು ವರ್ತತೇ ದೇಹಮುಕ್ತಿಕೇ ।**
**ಚಿತ್ತೇ ಚೈತ್ಯದಶಾಹೀನೇ ಯಾ ಸ್ಥಿತಿಃ ಕ್ಷೀಣಚೇತಸಾಮ್ ॥**

ಜೀವನ್ಮುಕ್ತನಲ್ಲಿ ನಿದ್ರೆ ಮತ್ತು ಪಾಪಗಳು ನಾಶವಾಗಿರುತ್ತವೆ. ಕೃಶವಾದ ಮನದವರಿಗೆ ಚಿತ್ತವು ವ್ಯವಹಾರಾವಸ್ಥೆಯಿಲ್ಲದ್ದಾಗಲು, ಅದುವೇ ಜೀವನ್ಮುಕ್ತಿಯಾಗಿದೆ. ॥೧೧॥

**ಸೋಚ್ಯತೇ ಶಾಂತಕಲನಾ ಜಾಗ್ರತ್ಯೇವ ಸುಷುಪ್ತತಾ ।**
**ನೈತಜ್ಜಾಗ್ರನ್ನಚ ಸ್ವಪ್ನಃ ಸಂಕಲ್ಪಾನಾಮಭಾವನಾತ್ ॥**

ಎಚ್ಚರದಲ್ಲಿಯೇ ಯಾವನ ಎಲ್ಲಾ ವೃತ್ತಿಗಳು ಶಾಂತವಾಗಿವೆಯೋ ಆ ಅವಸ್ಥೆಯು ಸುಷುಪ್ತಿಯಾಗಿದೆ. ಸಂಕಲ್ಪಗಳಿಲ್ಲದಿರಲು ಅದು ಜಾಗ್ರತ್ತೂ ಅಲ್ಲ ಮತ್ತು ಅದು ಸ್ವಪ್ನವೂ ಅಲ್ಲ. ಕಿಂತು ಅದು ಜೀವನ್ಮುಕ್ತಿಯು ॥೧೨॥

**ಸುಷುಪ್ತಭಾವೋ ನಾಪ್ಯೇತದಭಾವಾಜ್ಜಡತಾ ಸ್ಥಿತೇಃ ।**

ನಿದ್ರೆಯಲ್ಲಿದ್ದಂತೆ ಸ್ವರೂಪಾವಸ್ಥೆಯಲ್ಲಿ ಜಾಗ್ರತ್ ಸ್ವಪ್ನವಿಲ್ಲದೆ ಕೇವಲ ಜಡಭಾವವಿರುವುದಿಲ್ಲ. [ಇದು ಅಭಾವದಂತೆ ಜಡದಂತಿರುವ ನಿದ್ರೆಯ ಅವಸ್ಥೆಯು ಅಲ್ಲ] ॥೧೩॥

**ಸತ್ತಾಮವಬೋಧ ಏವಾಸೌ ವಾಸನಾತ್ಮೇನ ಪಾವಕಃ ।**

ಈ ಬ್ರಹ್ಮಜ್ಞಾನದ ಸ್ವರೂಪಸ್ಥಿತಿಯು (ಸಮಾಧಿಯು) ವಾಸನೆಗಳೆಂಬ ಹುಲ್ಲಿಗೆ ಅಗ್ನಿಯಂತಿದೆ. ॥೧೪॥

ಪ್ರೋಕ್ತಃ ಸಮಾಧಿಶಬ್ದೇನ ನ ತು ತೂಷ್ಣೀಮವ ಸ್ಥಿತಿಃ ॥

ಯಾವುದು ಸಮಾಧಿ ಎಂಬ ಶಬ್ದದಿಂದ ಹೇಳಲ್ಪಟ್ಟದೆಯೋ, ಅದು ಸುಮ್ಮನಿರುವುದು ಅಲ್ಲ. ॥೧೫॥

ನಿರ್ವಿಕಾರತಯಾ ವೃತ್ತ್ಯಾ ಬ್ರಹ್ಮಾಕಾರತಯಾ ಪುನಃ । ವೃತ್ತಿವಿಸ್ಮರಣಂ ಸಮ್ಯಕ್ಸಮಾಧಿರಭಿಧೀಯತೇ ॥

ಬಳಿಕ ನಿರ್ವಿಕಾರವಾದ ವೃತ್ತಿಯು ಬ್ರಹ್ಮಾಕಾರದಿಂದಿದ್ದು ಚನ್ನಾಗಿ ಎಲ್ಲವನ್ನೂ ಮರೆಯುವುದು ಸಮಾಧಿಯಾಗಿದೆ. ॥೧೬॥

ದೃಶ್ಯಾಸಂಭವಬೋಧೇನ ರಾಗದ್ವೇಷಾದಿತಾನವೇ ರತಿರ್ಬಲೋದಿತಾ ಯಾ ಸಾ ಸಮಾಧಿರಭಿಧೀಯತೇ ॥

ಹೊರಗಿನ ನಾಮರೂಪುಗಳ ಜ್ಞಾನವು ಮರೆಯಾಗಲು ರಾಗ, ದ್ವೇಷಗಳು ಡಿಮೆ (ಕೃಶ) ವಾಗುತ್ತವೆ. ಆಗ ಯಾವ ಪ್ರಯತ್ನದಿಂದುಂಟಾದ ಆತ್ಮರತಿಯು ಇದೆಯೋ, ಅದು ಸಮಾಧಿಯಾಗಿದೆ. ॥೧೭॥

ಅಹಮೇವ ಪರಂ ಬ್ರಹ್ಮ ಬ್ರಹ್ಮಾಹಮಿತಿ ಸಂಸ್ಥಿತಿಃ ।
ಸಮಾಧಿ ಸ ತು ವಿಜ್ಞೇಯಃ ಸರ್ವವೃತ್ತಿ ನಿರೋಧಕಃ ॥

ನಾನೇ ಪರಬ್ರಹ್ಮವು ಪರಬ್ರಹ್ಮವೇ ನಾನಾಗಿದ್ದೇನೆಂಬ ಸ್ಥಿತಿಯು

ಸಮಾಧಿಯಾಗಿದೆ ಎಂದು ತಿಳಿಯಬೇಕು. ಅದು ಎಲ್ಲ ವೃತ್ತಿಗಳ ನಿರೋಧಕವೆಂದು ತಿಳಿಯಬೇಕು. ॥೧೮॥

**ಸಮಾಧಿಃ ಸಂವಿದುತ್ಪತ್ತಿಃ ಪರ ಜೀವೈಕತಾಂ ಪ್ರತಿ ।**
**ಧ್ಯಾನಸ್ಯ ವಿಸ್ಮೃತಿ ಸಮ್ಯಕ್ಸಮಾಧಿ ರ ಭಿ ಧೀಯತೇ ॥**

ಜೀವಬ್ರಹ್ಮರ ಏಕತ್ವ ಜ್ಞಾನೋದಯವೇ ಸಮಾಧಿಯಾಗಿದೆ. ಮತ್ತು ನಾನು ಧ್ಯಾನ ಮಾಡುವವನೆಂಬುದನ್ನೂ ಆಧ್ಯಾನವನ್ನೂ ಕೂಡ ಚನ್ನಾಗಿ ಮರೆಯುವುದು. ಸಮಾಧಿಯಾಗಿದೆ. ॥೧೯॥

**ಸಮಾಹಿತಾ ನಿತ್ಯತೃಪ್ತಾ ಯಥಾಭೂತಾರ್ಥದರ್ಶಿನೀ ಬ್ರಹ್ಮ**
**ನ್ಸಮಾಧಿ ಶಬ್ದೇನ ಪರಾ ಪ್ರಜ್ಞೋಚ್ಯತೇ ಬುಧೈಃ ॥**

ಏಕಾಗ್ರವಾದ, ನಿತ್ಯ ತೃಪ್ತವಾದ, ಇದ್ದಕ್ಕಿದ್ದಂತೆ ನೋಡುವಿಕೆ ಎಂಬ ಜ್ಞಾನವನ್ನು ಶ್ರೇಷ್ಠವಾದ ಸಮಾಧಿ ಎಂದು ಪಂಡಿತರು ಹೇಳುತ್ತಾರೆ. ॥೨೦॥

**ಅಕ್ಷುಬ್ಧಾ ನಿರಹಂಕಾರಾ ದ್ವಂದ್ವೇಷ್ವನನು ತಾಪಿನೀ ಬ್ರಹ್ಮನ್ಸಮಾಧಿ**
**ಶಬ್ದೇನ ಮೇರೋಃ ಸ್ಥಿರತರಾ ಸ್ಥಿತಿಃ ॥**

ಹೇ ಬ್ರಹ್ಮನೇ, ಕ್ಷೋಭೆರಹಿತವಾದ ಅಹಂಕಾರವಿಲ್ಲದ ಶೀತಾದಿ ದ್ವಂದ್ವಗಳಲ್ಲಿ ತಾಪಪಡದಿರುವ. ಸುಮೇರು ಪರ್ವತದಂತೆ ಬಹಳ ಸ್ಥಿರವಾದ ಅವಸ್ಥೆಯು ಸಮಾಧಿಯಾಗಿದೆ. ॥೨೧॥

**ನಿಶ್ಚಿತಾ ವಿಗತಾಭೀಷ್ಟಾ ಹೇಯೋಪಾದೇಯ ವರ್ಜಿತಾ ।**
**ಬ್ರಹ್ಮನ್ ಸಮಾಧಿಶಬ್ದೇನ ಪರಿಪೂರ್ಣ ಮನೋಗತಿಃ ॥**

ಹೇ ಬ್ರಹ್ಮನೇ ನಾನೇ ಬ್ರಹ್ಮನೆಂದು ನಿಶ್ಚಯಿಸಲ್ಪಟ್ಟು, ಹೋಗಲ್ಪಟ್ಟ ಸಕಲ ಆಸೆಯುಳ್ಳ, ಪಡೆಯುವುದು ಬಿಡುವುದೆಂಬುವುದಿಲ್ಲದ, ಪರಿಪೂರ್ಣವಾಗಿ ನಾನೇ ಎಲ್ಲೆಡೆಯಲ್ಲಿದ್ದೇನೆಂಬ ಅವಸ್ಥೆಯು ಸಮಾಧಿಯಾಗಿದೆ. ॥೨೨॥

**ಸಲಿಲೇ ಸೈಂಧವಂ ಯದ್ವತ್ಸಾಮ್ಯಂ ಭಜತಿ ಯೋಗತಃ ।**
**ತಥಾಽತ್ಮಮನಸೋರೈಕ್ಯಂ ಸಮಾಧಿರಭಿಧೀಯತೇ ॥**

ನೀರಿನಲ್ಲಿ ಕೂಡಿದ ಉಪ್ಪು. ನೀರೇ ಆಗುವಂತೆ ಆತ್ಮನಲ್ಲಿ ಕೂಡಿದ ಮನವು ಆತ್ಮನಲ್ಲಿ ಕೂಡಿ ಆತ್ಮನೇ ಆಗುತ್ತದೆ. ಅದುವೇ ಸಮಾಧಿಯು. [ಆತ್ಮ ಮನಗಳ ಸಮರಸವೇ ಸಮಾಧಿಯು]॥೨೩॥

**ಯತ್ಸಮತ್ವಂ ತಯೋರತ್ರ ಜೀವಾತ್ಮಪರಮಾತ್ಮನೋಃ ।**
**ಸಮಸ್ತ ನಷ್ಟ ಸಂಕಲ್ಪಃ ಸಮಾಧಿರಭಿಧೀಯತೇ ॥**

ಇಲ್ಲಿ ಯಾವ ಜೀವಾತ್ಮ ಪರಮಾತ್ಮರ ಐಕ್ಯವಿದೆಯೋ, ಮತ್ತು ಸಕಲ ಸಂಕಲ್ಪಗಳ ನಾಶವಿದೆಯೋ, ಅದು ಸಮಾಧಿಯಾಗಿದೆ. ॥೨೪॥

**ಪ್ರಭಾಶೂನ್ಯಂ ಮನಃಶೂನ್ಯಂ ಬುದ್ಧಿಶೂನ್ಯಂ ನಿರಾಮಯಮ್।**
**ಸರ್ವಶೂನ್ಯಂ ನಿರಾಭಾಸಂ ಸಮಾಧಿರಭಿಧೀಯತೇ ॥**

ಪ್ರಭೆಯು ಇಲ್ಲದ, ಮನವಿಲ್ಲದ, ಬುದ್ಧಿಯಿಲ್ಲದ, ದುಃಖವಿಲ್ಲದ, ಏನೊಂದೂ ಅನಾತ್ಮವಿಲ್ಲದ ಯಾವುದರಿಂದಲೂ ತಿಳಿಸಿಕೊಳ್ಳದಿರುವಿಕೆಯೇ ಸಮಾಧಿಯು. ॥೨೫॥

**ಬ್ರಹ್ಮಾಕಾರಮನೋವೃತ್ತಿ ಪ್ರವಾಹೋಽಹಂ ಕೃತಿಂವಿನಾ ।**
**ಸಂಪ್ರಜ್ಞಾತಸಮಾಧಿಃ ಸ್ಯಾದ್ಧ್ಯಾನಾಭ್ಯಾಸ ಪ್ರಕರ್ಷತಃ ॥**

ನಾನೆಂಬ ಅಹಂಕಾರವಿಲ್ಲದೆ, ತೈಲ ಧಾರೆಯಂತೆ ಹೆಚ್ಚಾದ ನಿದಿಧ್ಯಾಸದ ಅಭ್ಯಾಸದ ಬಲದಿಂದ ನಾನೇ ಬ್ರಹ್ಮನೆಂಬ ಮನೋವೃತ್ತಿಗಳ ಪ್ರವಾಹವು ಸಂಪ್ರಜ್ಞಾತ ಸಮಾಧಿಯಾಗಿದೆ. ॥೨೬॥

**ಪ್ರಶಾಂತ ವೃತ್ತಿಕಂ ಚಿತ್ತಂ ಪರಮಾನಂದದೀಪಕಮ್ ।**
**ಅಸಂಪ್ರಜ್ಞಾತ ನಾಮಾಯಂ ಸಮಾಧಿ ರ್ಯೋಗಿನಾಂ ಪ್ರಿಯಃ॥**

ಪರಮಾನಂದವನ್ನು ಪ್ರಕಾಶಮಾಡುವ ಚಿತ್ತವು ವೃತ್ತಿಗಳಿಲ್ಲದ್ದಾಗಲು, ಇದು ಅಸಂಪ್ರಜ್ಞಾತವೆಂಬ ಹೆಸರಿನ ಸಮಾಧಿಯಾಗಿದೆ. ಇದು ಯೋಗಿಗಳಿಗೆ ಪ್ರಿಯವಾದದ್ದು. ॥೨೭॥

**ಸ್ವಾನುಭೂತಿರಸಾವೇಶಾದ್ದೃಶ್ಯ ಶಬ್ದಾವು ಪೇಕ್ಷಿತುಃ ।**
**ನಿರ್ವಿಕಲ್ಪಃ ಸಮಾಧಿಃ ಸ್ಯಾನ್ನಿವಾತ ಸ್ಥಿತದೀಪವತ್ ॥**

ತನ್ನ ಸ್ವರೂಪಾನುಭವದ ರಸದ ಆವೇಶದಿಂದ ದೃಶ್ಯವಾದ ಪ್ರಪಂಚವನ್ನು ಉಪೇಕ್ಷೆಮಾಡುವವನಿಗೆ ಗಾಳಿಯಿಲ್ಲದ ಸ್ಥಳದಲ್ಲಿರುವ ಅಚಲ ದೀಪದಂತಿರುವ ನಿರ್ವಿಕಲ್ಪ ಸಮಾಧಿಯುಂಟಾಗುತ್ತದೆ. ॥೨೮॥

**ಪ್ರಭಾಶೂನ್ಯಂ ಮನಃಶೂನ್ಯಂ ಬುದ್ಧಿ ಶೂನ್ಯಂ ಚಿದಾತ್ಮಕಮ್ ।**
**ಅಂತರ್ವ್ಯಾವೃತ್ತಿರೂಪೋಽಸೌ ಸಮಾಧಿರ್ಮುನಿಭಾವಿತಃ ॥**

ಪ್ರಭೆಯುಯಿಲ್ಲದ ಮನವಿಲ್ಲದ, ಬುದ್ಧಿಯಿಲ್ಲದ ಚಿದ್ರೂಪವಾದ

ಒಳಗಡೆ ಅನಾತ್ಮಗಳನ್ನು ಬೇರ್ಪಡಿಸುವ ರೂಪವಾದದ್ದನ್ನು ಮುನಿಗಳು ಸಮಾಧಿ ಎಂದು ತಿಳಿದಿದ್ದಾರೆ. ॥೨೯॥

ಊರ್ಧ್ವಪೂರ್ಣಮಧಃಪೂರ್ಣಂ ಶಿವಾತ್ಮಕಮ್ ।
ಸಾಕ್ಷಾದ್ವಿಧಿಮುಖೋ ಹ್ಯೇಷ ಸಮಾಧಿಃ ಪಾರಮಾರ್ಥಿಕಃ ॥

ಮೇಲೆ ಪೂರ್ಣವು ಕೆಳಗಡೆ ಪೂರ್ಣವು. ಮಧ್ಯದಲ್ಲಿ ಪೂರ್ಣವು ಮಂಗಳರೂಪವಾದ ನೇರವಾಗಿ ವಿಧಿಮುಖವಾದದ್ದು ಇದು ಯಥಾರ್ಥವಾದ ನಿಜವಾದ ಸಮಾಧಿಯು ॥೩೦॥

## ಸಮಾಧಿ ವಾಕ್ಯಗಳು

## ಹತ್ತನೇ ಪ್ರಕರಣವು ಮುಗಿದಿದೆ.

## ಎಂಟು ರೀತಿಯಾದ ಸ್ವರೂಪ ವಾಕ್ಯಗಳಲ್ಲಿ ನಾನಾ

## ಲಿಂಗಸ್ವರೂಪ ವಾಕ್ಯಗಳು

ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್ವಾಚೋ ಹ ವಾಚಂ ಸ ವು ಪ್ರಾಣಸ್ಯ ಪ್ರಾಣಃ ॥

ಆತ್ಮನು ಕಿವಿಗಳಿಗೂ ಕಿವಿಯಾಗಿದ್ದಾನೆ ಮನಸ್ಸಿಗೂ ಮನವಾಗಿದ್ದಾನೆ, ಮಾತಿಗೂ ಮಾತಾಗಿದ್ದಾನ. ಮತ್ತು ಪ್ರಾಣಕ್ಕೂ ಪ್ರಾಣವಾಗಿದ್ದಾನೆ. ॥೧॥

**ಯೋ ವೈ ಭವಾ ತದಮೃತಮ್**

ಯಾವುದು ದೊಡ್ಡದೋ ವ್ಯಾಪಕವೋ, ಅದು ಅಮೃತ (ಬ್ರಹ್ಮ) ವಾಗಿದೆ. ॥೨॥

**ಸತ್ಯಸ್ಯ ಸತ್ಯಮಿತಿ ಪ್ರಾಣಾ, ವೈ ಸತ್ಯಂ ತೇಷಾಮೇವ ಸತ್ಯಮ್ ರಾತೇದಾರ್ಾತುಃ ಪರಾಯಣಮ್ ।**

ಸತ್ಯಕ್ಕೂ ಸತ್ಯವೆಂದು ಇಲ್ಲಿ ಪ್ರಾಣಗಳೇ ಸತ್ಯವು ಅವುಗಳಿಗೆ ಪ್ರೇರೇಪಕನಾದಆತ್ಮನು ಪಾರಮಾರ್ಥಿಕ ಸತ್ತೆಯುಳ್ಳವನಾಗಿದ್ದಾನೆ.

ಕರ್ಮ ಫಲಗಳನ್ನು ಕೊಡುವ ಪರಮಾತ್ಮನಿಗೆ ಬ್ರಹ್ಮವು ಅಧಿಷ್ಠಾನವಾಗಿದೆ. ॥೩॥

**ಸ ಪರ್ಯಗಾಚ್ಛುಕ್ರಮಕಾಯಮವ್ರಣಮಸ್ನಾವಿ ರಂ ಶುದ್ಧಮ ಪಾಪವಿದ್ಧಮ್ ॥**

ಆತ್ಮನು ಆಕಾಶದಂತೆ ವ್ಯಾಪಕನೂ ಜ್ಯೋತಿರ್ಮಯನೂ ಸೂಕ್ಷ್ಮ ಸ್ಥೂಲ ಮತ್ತು ಕಾರಣ ಶರೀರಗಳಿಲ್ಲದವನು ಮತ್ತು ಪಾಪರಹಿತನೂ ಆಗಿದ್ದಾನೆ. ॥೪॥

**ಪ್ರಣವೋ ಹ್ಯಪರ. ಬ್ರಹ್ಮ ಪ್ರಣವಶ್ಚ ಪರಃ ಸ್ಮೃತಃ**

ಓಂಕಾರವೇ ಪರಬ್ರಹ್ಮ ಮತ್ತು ಅಪರ (ಸಗುಣ) ಬ್ರಹ್ಮ ವಾಗಿದೆ. ॥೫॥

**ನ ನಿರೋಧೋ ನ ಚೋತ್ಪತ್ತಿರ್ನಬದ್ಧೋ ನ ಚ ಸಾಧಕಃ ॥**

ನ ಮುಮುಕ್ಷು ರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ ॥

ನನಗೆ ಜನನ ಮರಣಗಳಿಲ್ಲ. ನಾನು ಬದ್ಧನಲ್ಲ ಮತ್ತು ಸಾಧಕನಲ್ಲ ನಾನು ಮುಮುಕ್ಷುವಲ್ಲ ಮತ್ತು ಮುಕ್ತನಲ್ಲ ಇದು ನಿಜವಾದದ್ದು. ॥೬॥

ಅಖಂಡೈಕರಸಂ ಶಾಸ್ತ್ರ ಮಖಂಡೈಕರಸಾ ತ್ರಯೀ ।
ಅಖಂಡೈಕರಸೋ ದೇಹ ಅಖಂಡೈಕರಸಂ ಮನಃ ॥

ಎಲ್ಲವೂ ಆತ್ಮಮಯವೆಂದು ಹೇಳುತ್ತಾರೆ. ಶಾಸ್ತ್ರವು ಅಖಂಡೈಕರಸವಾಗಿದೆ. ಋಗಾದಿ ವೇದಗಳೂ ಕೂಡ ಅಖಂಡೈಕರಸವಾಗಿವೆ. ದೇಹ ಮತ್ತು ಮನಗಳೂ ಕೂಡ ಅಖಂಡೈಕರಸವಾಗಿವೆ. ॥೭॥

ಅಖಂಡೈಕರಸಂ ಸೂತ್ರಮಖಂಡೈಕರಸೋ ವಿರಾಟ್ ।

ಸಮಷ್ಟಿ ಸ್ಥೂಲ ಶರೀರದ ಅಭಿಮಾನಿಯಾದ ವಿರಾಟನೂ ಮತ್ತು ಸಮಷ್ಟಿ ಸೂಕ್ಷ್ಮಶರೀರದ ಅಭಿಮಾನಿಯಾದ ಹಿರಣ್ಯಗರ್ಭನೂ ಅಖಂಡೈಕರಸ ಬ್ರಹ್ಮರೇ ಆಗಿದ್ದಾರೆ. ॥೮॥

ಅಖಂಡೈಕರಸಾ ವಿದ್ಯಾ ಹ್ಯಖಂಡೈಕರಸೋಽವ್ಯಯಃ ।
ಅಖಂಡೈಕರಸಂ ಗೋಪ್ಯಮಖಂಡೈಕರಸಃ ಶಶೀ ॥

ವಿದ್ಯೆಯೂ ವಿದ್ಯೆಯಿಂದ ತಿಳಿಯಲು ಯೋಗ್ಯವಾದ ಬ್ರಹ್ಮವೂ ಅಖಂಡೈಕ ರಸವಾಗಿದೆ. ಅನಧಿಕಾರಿಗಳಿಗೆ ಬೋಧಿಸಲಾಗದ ಬ್ರಹ್ಮವು, ಮತ್ತು ಚಂದ್ರನು ಅಖಂಡೈಕರಸರಾಗಿದ್ದಾರೆ. ॥೯॥

**ಅಖಂಡೈಕರಸಂ ಕ್ಷೇತ್ರಮಖಂಡೈಕರಸಾ ಕ್ಷಮಾ । ಅಖಂಡೈಕರಸಾಸ್ತಾರಾ ಅಖಂಡೈಕರಸೋ ರವಿಃ ॥**

ಕ್ಷೇತ್ರ (ಶರೀರ) ವು ಮತ್ತು ಕ್ಷಮೆಯು ಅಖಂಡೈಕರಸವಾಗಿವೆ. ನಕ್ಷತ್ರಗಳು ಮತ್ತು ಸೂರ್ಯನು ಅಖಂಡೈಕವಾದ ಬ್ರಹ್ಮವೇ ಆಗಿದ್ದಾರೆ. ॥೧೦॥

**ಅಖಂಡೈಕರಸೋ ಜ್ಞಾತಾ ಅಖಂಡೈಕರಸಾ ಸ್ಥಿತಿಃ ।**
**ಅಖಂಡೈಕರಸಾ ಮಾತಾ ಅಂಖಡೈಕರಸಃ ಪಿತಾ ॥**
**ಅಖಂಡೈಕರಸೋ ರಾಜಾ ಅಖಂಡೈಕರಸಂ ಪುರಮ್ ।**
**ಅಖಂಡೈಕರಸಂ ಶಾರನುಖಂಡೈಕರಸೋ ಜಪಃ ॥**

ಜ್ಞಾತೃವು, ಸ್ಥಿತಿಯು, ತಾಯಿಯು, ತಂದೆಯು, ರಾಜನು, ಪಟ್ಟಣವು ಶಬ್ದವು, ಜಪವು ಇವೆಲ್ಲವೂ ಅಖಂಡೈಕರಸವಾಗಿವೆ. ॥೧೧॥

**ಆದಿರಂತಂ ಚ ಚಿನ್ಮಾತ್ರಂ ಗುರು ಶಿಷ್ಯಾದಿ ಚಿನ್ಮಯಮ್ ॥**

ಮೊದಲು ಮತ್ತು ಕೊನೆಗೂ ಅರುಮಾತ್ರವಿದೆ. ಗುರು, ಶಿಷ್ಯ ಮೊದಲಾದವರೂ ಕೂಡ ಸಕ್ಕರೆಯ ಗೊಂಬೆಗಳು ಸಕ್ಕರೆಯಾದಂತೆ ಅರುರೂಪರೇ ಆಗಿದ್ದಾರೆ. ॥೧೨॥

**ದೃಶ್ಯಾದೃಶ್ಯಂ ಯದಿ ಚಿನ್ಮಾತ್ರಮಸ್ತಿ ಚೇಚ್ಚಿನ್ಮಯಂ ಸದಾ ।**
**ಸರ್ವಾಶ್ಚರ್ಯಂ ಚ ಚಿನ್ಮಾತ್ರಂ ದೇಹಶ್ಚಿನ್ಮಾತ್ರಮೇವ ಹಿ**

ಒಂದುವೇಳೆ ನೋಡಿಸಿಕೊಳ್ಳುವ ಜಗತ್ತು ಮತ್ತು ನೋಡುವ

ಜೀವನು ಅರುರೂಪವಾದದ್ದಾರೆ, ಅವು ಯಾವಾಗಲೂ ಆರುರೂಪವೇ ಆಗಿವೆ. ಸರ್ವ ಆಶ್ಚರ್ಯಗಳೂ ಮತ್ತು ದೇಹವೂ ಜ್ಞಾನಸ್ವರೂಪವೇ ಆಗಿವೆ ‖೧೩‖

ಅಹಂ ತ್ವಂ ಚೈವ ಚಿನ್ಮಾತ್ರಂ ಮೂರ್ತಾಮೂರ್ತಾದಿ ಚಿನ್ಮಯಮ್ । ಪುಣ್ಯಂ ಪಾಪಂ ಚ ಚಿನ್ಮಾತ್ರಂ ಜೀವಶ್ಚಿನ್ಮಾತ್ರವಿಗ್ರಹಃ ‖

ನಾನು ಮತ್ತು ನೀನು ಚೈತನ್ಯರೂಪರು. ಪೃಥ್ವಿ, ಜಲ, ಅಗ್ನಿಗಳೆಂಬ ಮೂರ್ತಗಳು ಮತ್ತು ಆಕಾಶ, ವಾಯುವೆಂಬ ಅಮೂರ್ತಗಳು ಅಥವಾ ಮಾಯಾತತ್ಕಾರ್ಯವಾವ ಜಗತ್ತು ಚಿನ್ಮಯವಾಗಿದೆ. ಪಾಪ, ಪುಣ್ಯಗಳು ಚಿನ್ಮಾತ್ರವಾಗಿವೆ, ಇಲ್ಲಿ ಜೀವನೂ ಕೂಡ ಚಿತ್ತಿನ ಗಟ್ಟಿಯೇ ಆಗಿದ್ದಾನೆ, ‖೧೪‖

ದೇಹತ್ರಯ ವಿಹೀನತ್ವಾತ್ಕಾಲತ್ರಯ ವಿವರ್ಜನಾತ್ ।
ಜೀವತ್ರಯ ಗುಣಾಭಾವಾತ್ತಾಪತ್ರಯ ವಿವರ್ಜನಾತ್ ।
ಲೋಕತ್ರಯ ವಿಹೀನತ್ವಾತ್ಸರ್ವಮಾತ್ಮೇತಿ ಶಾಸನಾತ್ ।

ಸ್ಥೂಲಾದಿ ಮೂರು ದೇಹಗಳಿಲ್ಲದ್ದರಿಂದ ಭೂತಾದಿ ಮೂರು ಕಾಲಗಳಿಲ್ಲದ್ದರಿಂದ ವಿಶ್ವಾದಿ ಜೀವ ಮತ್ತು ಸತ್ವಾದಿ ಮೂರು ಗುಣಗಳಿಲ್ಲದಿರುವುದರಿಂದ ಅಧ್ಯಾತ್ಮಿಕಾದಿ ಮೂರು ತಾಪಗಳಿಲ್ಲದಿರುವುದರಿಂದ ಸ್ವರ್ಗಾದಿ ಲೋಕಗಳಿಲ್ಲದಿರುವುದರಿಂದ ಈ ಉಕ್ತ ದೃಶ್ಯವೆಲ್ಲವೂ

ಬ್ರಹ್ಮವೇಎಂದು ಶ್ರುತಿಶಾಸನವಿದೆ ಆದ್ದರಿಂದ 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಹೇಳಿದ್ದಾರೆ, ॥೧೫॥

**ಚಿತ್ತಾಭಾವಾಚ್ಚಿಂತನೀಯಂ ದೇಹಾಭಾವಾಜ್ಜರಾ ನ ಚ ।**
**ಪಾದಾಭಾವಾದ್ಗತಿರ್ನಾಸ್ತಿ ಹಸ್ತಾಭಾವಾತ್ಕ್ರಿಯಾ ನ ಚ ॥**

ಚಿತ್ತವಿಲ್ಲದಿರುವುದರಿಂದ ಚಿಂತಿಸುವುದಿಲ್ಲ. ದೇಹವಿಲ್ಲದಿರುವುದರಿಂದ ಮುಪ್ಪು ಇರುವುದಿಲ್ಲ. ಕಾಲುಗಳಿಲ್ಲದಿರುವುದರಿಂದ ಗಮನವಿರುವುದಿಲ್ಲ. ಹಸ್ತಗಳಿಲ್ಲದಿರುವುದರಿಂದ ಕೆಲಸಮಾಡುವುದಿಲ್ಲ. ॥೧೬॥

**ಮೃತ್ಯುರ್ನಾಸ್ತಿ ಜನನಾಭಾವಾದ್ಬುದ್ಧ್ಯಭಾವಾತ್ಸುಖಾದಿಕಮ್ ।**

ನಾನು ಹುಟ್ಟಿಲ್ಲದಿರುವುದರಿಂದ ನನಗೆ ಮರಣವಿಲ್ಲ. ಬುದ್ಧಿಯು ಇಲ್ಲದಿರುವುದರಿಂದ ಸುಖ-ದುಃಖಾದಿಗಳಿರುವುದಿಲ್ಲ. ॥೧೭॥

ಈ ಪ್ರಕಾರ ನಾನಾಲಿಂಗ ಸ್ವರೂಪವಾಕ್ಯಗಳು

## ಪುಲ್ಲಿಂಗ ಸ್ವರೂಪ ವಾಕ್ಯಗಳು

**ಸ ಏಷೋಽಕಲೋಽ ಮೃತಃ**

ಈ ಆತ್ಮನು ಪ್ರಾಣಾದಿ ಕಲೆಗಳಿಲ್ಲದವನೂ ಮರಣರಹಿತನೂ ಆಗಿದ್ದಾನೆ. ॥೧॥

**ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ ॥**

(ಯಾವ ಪೂರ್ಣರೂಪನಾದ ಆತ್ಮನಲ್ಲಿ) ಎಲ್ಲಿ ಮತ್ತೊಂದನ್ನು ಕೇಳುವುದು ತಿಳಿಯುವುದು ಇಲ್ಲವೋ ಅವನು ಭೂಮಾ (ವ್ಯಾಪಕ) ರೂಪನು. ॥೨॥

ಸ ಏಷ ನೇತಿ ನೇತ್ಯಾತ್ಮಾಗೃಹ್ಯೋ ನ ಹಿ ಗೃಹ್ಯತೇ ಅಶೀರ್ಯೋ ನ ಹಿ ಶೀರ್ಯತೇ ಅಸಂಗೋ ನ ಹಿ ಸಜ್ಜತೇಽಸಿತೋ ನ ರಿಷ್ಯತಿ ॥

ಈ ಆತ್ಮನು ಸ್ಥೂಲ ದೇಹವಲ್ಲ. ಸೂಕ್ಷ್ಮದೇಹನಲ್ಲ. ಕಾರಣದೇಹನಲ್ಲ ಅವನನ್ನು ಕರ್ಮೇಂದ್ರಿಯಗಳು ಮತ್ತು ಜ್ಞಾನೇಂದ್ರಿಯಗಳು ಗ್ರಹಿಸುವುದಿಲ್ಲ. ಸಾವಯವನಲ್ಲದ್ದರಿಂದ ಸವೆಯುವುದಿಲ್ಲ. ಅಸಂಗನು ಆದ್ದರಿಂದ ಅವನಿಗೆ ಯಾವದರ ಸಂಗವೂ ಇರುವುದಿಲ್ಲ. ಬದ್ಧನಲ್ಲದ್ದರಿಂದ ವ್ಯಥೆಗೊಳ್ಳುವುದಿಲ್ಲ. ಉಕ್ತ ಕಾರ್ಯ ಧರ್ಮಗಳಿಲ್ಲದವನಾದ್ದರಿಂದ ಹಿಂಸೆಯನ್ನು ಹೊಂದುವುದಿಲ್ಲ. ನಾಶವಾಗುವುದಿಲ್ಲವೆಂದು ಅರ್ಥ. ॥೩॥

ರಸಘನ ಏವೈವಂ ವಾಽರೇಽಯ ಮಾತ್ಮಾಽನಂತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏವ ತಸ್ಮಾನ್ಮನೋ ವಿಲೀನೇ ಮನಸಿ ಗತೇ ಸಂಕಲ್ಪೇ ವಿಕಲ್ಪೇ ದಗ್ಧೇ ಪುಣ್ಯಪಾಪೇ ಸದಾಶಿವಃ ॥

ನಿಜವಾಗಿಯೂ ಈ ಆತ್ಮನು. ಆನಂದದ ಗಟ್ಟಿಯೇ ಆಗಿದ್ದಾನೆ. ಮತ್ತು ಇವನಿಗೆ ಕಾರಣವಿಲ್ಲ ಮತ್ತು ಇವನನ್ನು ಬಿಟ್ಟು ಬೇರೆ. ಏನೂ

(ಕಾರ್ಯವೂ) ಇಲ್ಲ, ಸಂಪೂರ್ಣವಾಗಿ ಅರವಿನ ಗಟ್ಟಿಯೇ ಆಗಿದ್ದಾನೆ. ಆದ್ದರಿಂದ ಮನವು ಲಯವಾಗುತ್ತಿರಲು. ಮನದಲ್ಲಿರುವ ಸಂಕಲ್ಪ ವಿಕಲ್ಪಗಳು ಮತ್ತು ಸುಖ-ದುಃಖಗಳು ಸುಟ್ಟು ಹೋಗುತ್ತಿರಲು ಯಾವಾಗಲೂ ಮಂಗಲ ರೂಪನಾಗಿದ್ದಾನೆ. ||೪||

ಓಂ ಶಕ್ತ್ಯಾತ್ಮಕಃ ಸರ್ವತ್ರಾವಸ್ಥಿತಃ ಸ್ವಯಂ ಜ್ಯೋತಿಃ ಶುದ್ಧೋ ನಿತ್ಯೋ ನಿರಂಜನಃ ಶಾಂತತಮಃ ಪ್ರಕಾಶಯತಿ ||

ಓಂಕಾರರೂಪನೂ ಮಾಯಾ ಶಕ್ತಿಯುಳ್ಳವನೂ ಎಲ್ಲರ ಹೃದಯದಲ್ಲಿರುವವನೂ ಮಾಯಾ ಮತ್ತು ಅವಿದ್ಯೆಗಳಿಲ್ಲದವನೂ ಸ್ವಯಂ ಪ್ರಕಾಶನೂ ತ್ರಿಕಾಲಾಬಾಧ್ಯನೂ ಪಾಪರಹಿತನೂ ಆದ ಆತ್ಮನು ಅತ್ಯಂತ ಶಾಂತನಾಗಿ ಬೆಳಗುತ್ತಾನೆ. ||೫||

ಏಷ ಶುದ್ಧಃ ಪೂತಃ ಶೂನ್ಯಃ ಶಾಂತೋಽ ಪ್ರಾಣೋಽ ನೀಶಾತ್ಮಾನಂಶೋಽ ಕ್ಷಯಃ ಸ್ಥಿರಃ ಶಾಶ್ವತೋಽಜಃ ಸ್ವತಂತ್ರಃ ಸ್ವೇ ಮಹಿಮ್ನಿ ತಿಷ್ಠತಿ ||

ಅಪರೋಕ್ಷನಾದ ಆತ್ಮನು ಮಾಯಾರಹಿತನೂ ಪಾಪರಹಿತನೂ ದ್ವಂದ್ವಗಳಿಲ್ಲದವನೂ ಇಂದ್ರಿಯ ಮತ್ತು ಪ್ರಾಣಗಳಿಲ್ಲದವನೂ ಯಾರ ಒಡೆತನ ವಿಲ್ಲದವನು; ದೇಶ ಕಾಲಾದಿ ಪರಿಚ್ಛೇದ ರಹಿತನು ಕ್ಷಯವಿಲ್ಲದವನು ಕಂಬಾರನ ಅಡಿಗಲ್ಲಿನಂತೆ ಅಚಲನು. ಯಾವಾಗಲೂ ಒಂದೇ ಪ್ರಕಾರವಾಗಿರುವವನೂ ಸ್ವತಂತ್ರನೂ ಈ ಆತ್ಮನು ತನ್ನ ಮಹಿಮೆಯಲ್ಲಿ ತಾನಿದ್ದಾನೆ. ||೬||

**ಚಕ್ಷುಷ್ಷೋ ದ್ರಷ್ಟಾ ಶ್ರೋತ್ರಸ್ಯ ದ್ರಷ್ಟಾ ಮನಸೋದ್ರಷ್ಟಾ ವಾಚೋದ್ರಷ್ಟಾ ಬುದ್ಧೇರ್ದ್ರಷ್ಟಾ ಪ್ರಾಣಸ್ಯ ದ್ರಷ್ಟಾತಮಸೋ ದ್ರಷ್ಟಾ ಸರ್ವಸ್ಯ ದ್ರಷ್ಟಾ ತತಃ ಸರ್ವಸ್ಮಾದನ್ಯೋ ವಿಲಕ್ಷಣಃ ಸದ್ಘನೋಽಯಂ ಚಿದ್ಘನ ಆನಂದಘನ ಏವೈಕರಸೋಽ ವ್ಯವಹಾರ್ಯಃ||**

ಕಣ್ಣು, ಕಿವಿ, ಮನ, ವಾಣಿ, ಬುದ್ಧಿ, ಪ್ರಾಣ, ಕತ್ತಲೆ (ಅಜ್ಞಾನ) ಮೊದಲಾದವುಗಳೆಲ್ಲವುಗಳನ್ನು ಆತ್ಮನು ನೋಡುತ್ತಾನೆ. ನೋಡುವವನಾದ್ದರಿಂದ ನೋಡಿಸಿಕೊಳ್ಳುವ ಅವೆಲ್ಲವುಗಳಿಗಿಂತಲೂ ಬೇರೆಯಾದ ವಿಲಕ್ಷಣನಾದ ಈ ಆತ್ಮನು ಸಚ್ಚಿದಾನಂದವಾದ ಗಟ್ಟಿಯಾಗಿದ್ದಾನೆ. ಮತ್ತು ವಾಣಿಗೆ ಅತೀತನಾಗಿದ್ದಾನೆ. ||೭||

**ಸನ್ಮಾತ್ರೋ ನಿತ್ಯಃಶುದ್ಧೋ ಬುದ್ಧ ಸತ್ಯೋ ಮುಕ್ತೋ ನಿರಂಜನೋ ವಿಭುರದ್ವಯಾನಂದಃ ಪರಃ ಪ್ರತ್ಯಗೇಕರಸಃ ||**

ಕೇವಲ ಸದ್ರೂಪನೂ ತ್ರಿಕಾಲಾಬಾಧ್ಯನೂ ಮಾಯಾ, ಅವಿದ್ಯೆಗಳೆಂಬ ಮಲವಿಲ್ಲದವನೂ ಎಲ್ಲವನ್ನೂ ತಿಳಿಯುವವನೂ ನಿತ್ಯ ಮುಕ್ತನೂ ಪಾಪಾದಿ ಅಂಜನವಿಲ್ಲದವನೂ ವ್ಯಾಪಕನೂ ತನಗೆರಡನೆಯದ್ದಿಲ್ಲದವನೂ ಮತ್ತು ಆನಂದರೂಪವಾದ ಪರಬ್ರಹ್ಮವು ಎಲ್ಲರ ಅಂತರಾತ್ಮನಾಗಿರುತ್ತದೆ. ||೮||

**ಅದೃಷ್ಟೋಽವ್ಯವಹಾರ್ಯೋಽಪ್ಯಲ್ಪೋ ನಾಲ್ಪಃ ಸಾಕ್ಷ್ಯವಿಶೇಷಃ ಸರ್ವಜ್ಞೋಽ ನಂತೋಽ ಭಿನ್ನೋಽದ್ವಯೋ. ವಿದಿತಾವಿದಿ**

**ತಾತ್ಪರ: ॥ ಆತ್ಮನು ಜ್ಞಾನೇಂದ್ರಿಯಗಳಿಗೆ ಹಾಗೂ ಕರ್ಮೇಂದ್ರಿಯಗಳಿಗೆ ನಿಲುಕದವನು. ಹೃದಯೋಪಾಧಿಯಿಂದ ಅಲ್ಪನು** ಸ್ವರೂಪದಿಂದ ಪೂರ್ಣನೂ ಎಲ್ಲವನ್ನೂ ಎದುರಿಟ್ಟರಿಯು ವವನೂ ಯಾವ ವಿಶೇಷವೂ ಇಲ್ಲದವನೂ ಸರ್ವಜ್ಞನೂ ಸೀಮಾರಹಿ ತನೂ ಭೇದರಹಿತನೂ ಏಕನೂ ಕಾರ್ಯ, ಕಾರಣ ಪ್ರಪಂಚಕ್ಕಿಂತಲೂ ಬೇರೆಯಾಗಿದ್ದಾನೆ, ॥೯॥

**ಅಚಕ್ಷುರ್ವಿಶ್ವತಶ್ಚಕ್ಷುರಕರ್ಣೋ ವಿಶ್ವತಃ ಕರ್ಣಃ ಅಪಾದೋ ವಿಶ್ವತ: ಪಾದಃ ಅಪಾಣಿರ್ವಿಶ್ವತಃ ಪಾಣಿ ರಹಮುಶಿರಾ ವಿಶ್ವತಃ ಶಿರಾ ವಿದ್ಯಾಮಾತ್ರೈಕ ಸಂಶ್ರಯೋ ವಿದ್ಯಾರೂಪಃ ॥**

ಸ್ವರೂಪದಿಂದ ಆತ್ಮನಿಗೆ ಕಣ್ಣುಗಳಿರುವುದಿಲ್ಲ ಹಾಗಿದ್ದರೂ ಎಲ್ಲ ಕಡೆಗೂ ಕಣ್ಣುಗಳುಳ್ಳವನಾಗಿದ್ದಾನೆ. ಇದರಂತೆ ಕಿವಿಗಳಿಲ್ಲದವನಾದರೂ ಕಾಲುಗಳಿಲ್ಲದವನಾದರೂ ಕೈಗಳಿಲ್ಲದವನಾದರೂ ತಲೆಗಳಿಲ್ಲದವನಾ ದರೂ ಎಲ್ಲಕಡೆಗೂ ಕಿವಿ-ಕಾಲು ಕೈ ತಲೆಗಳುಳ್ಳವನಾಗಿದ್ದಾನೆ. ಕೇವಲ ವಿದ್ಯೆಗೆ ಮಾತ್ರ ಆಶ್ರಯನು. ಅಂದರೆ ಜ್ಞಾನರೂಪನು. ॥೧೦॥

**ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ ।**
**ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ಪರತಃ ಪರಃ ॥**

**ಸ್ವಯಂ ಪ್ರಕಾಶನೂ ನಿರವಯುವನೂ ಆದ ಆ ಆತ್ಮನು ಒಳ ಹೊರಗೂ ತುಂಬಿಕೊಂಡು ಜನ್ಮ ರಹಿತನಾಗಿದ್ದಾನೆ. ಮತ್ತು**

ಇಂದ್ರಿಯ ಮನಸ್ಸುಗಳಿಲ್ಲದವನೂ ನಿರ್ದೋಷನೂ ಮಾಯೆಗಿಂತಲೂ ಆಚೆ ಇದ್ದಾನೆ. ||೧೧||

ಅದ್ವೈತಃ ಸರ್ವಭಾವಾನಾಂ ದೇವಸ್ತುರ್ಯೋ ವಿಭುಃಸ್ಮೃತಃ ||

ಸರ್ವ ಜೀವಿಗಳಲ್ಲಿ ದೇವನು ಒಬ್ಬನಿದ್ದಾನೆ ಅವನು ನಾಲ್ಕನೆಯವನೂ ವ್ಯಾಪಕನು ಆಗಿದ್ದಾನೆ. ||೧೨||

ಅಪೂರ್ವೋಽನಂತರೋಽಬಾಹ್ಯೋ ನ ಪರಃ ಪ್ರಣವೋಽವ್ಯಯಃ |

ಓಂಕಾರ ವಾಚ್ಯವಾದ ಬ್ರಹ್ಮವು ಕಾರ್ಯ ಕಾರಣಗಳಿಲ್ಲದ್ದೂ ಅವಿರಳವೂ ವ್ಯಯವಿಲ್ಲದ್ದೂ ಆಗಿದೆ ಅದಕ್ಕಿಂತ ಆಚೆ ಬೇರೆನೂ ಇರುವುದಿಲ್ಲ. ||೧೩||

ಅಮಾತ್ರೋಽನಂತಮಾತ್ರಶ್ಚ ದ್ವೈತಸ್ಯೋಽಪಶಮಃ ಶಿವಃ |

ಬ್ರಹ್ಮವು ಉಪಾಧಿಯಿಂದ ಅನಂತ ಮಾತ್ರೆಗಳುಳ್ಳದ್ದಾದರೂ ಸ್ವರೂಪದಿಂದ ಮಾತ್ರೆಗಳಿಲ್ಲದ್ದಾಗಿದೆ ಮತ್ತು ದ್ವೈತವಿಲ್ಲದ್ದೂ ಮಂಗಳರೂಪವೂ ಆಗಿದೆ. ||೧೪||

ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ||

ದೇಹೇಂದ್ರಿಯಗಳ ಕರ್ಮಗಳ ಅಧ್ಯಕ್ಷನೂ, ಬ್ರಹ್ಮನೇ ಮೊದಲ್ಗೊಂಡು ಹುಲ್ಲು ಕಡ್ಡಿಯವರೆಗಿನ ಎಲ್ಲ ಜೀವಿಗಳ ದೇಹಗಳಲ್ಲಿರು

ವವನೂ, ಅವಸ್ಥಾತ್ರಯ ಸಾಕ್ಷಿಯೂ, ಏನೊಂದಿಲ್ಲದ ಗುಣರಹಿತನೂ ಆಗಿದ್ದಾನೆ. ॥೧೫॥

**ಸರ್ವ ಸಂಕಲ್ಪರಹಿತಃ ಸರ್ವನಾದಮಯಃ ಶಿವಃ ॥**

ಶಿವನು ಸರ್ವಸಂಕಲ್ಪರಹಿತನೂ ಸರ್ವನಾದಮಯನೂ ಆಗಿದ್ದಾನೆ ॥೧೬॥

**ಸರ್ವವರ್ಜಿತಚಿನ್ಮಾತ್ರಃ ಸರ್ವಾನಂದ ಮಯಃ ಪರಃ ।**
**ಸರ್ವಾನುಭವವಿನಿರ್ಮುಕ್ತಃ ಸರ್ವ ಧ್ಯಾನವಿವರ್ಜಿತಃ ॥**

ಆತ್ಮನು ಸರ್ವ ಉಪಾಧಿ ಹಾಗೂ ಅವುಗಳ ಧರ್ಮರಹಿತವಾಗಿಯೂ ಅರುರೂಪವಾಗಿಯೂ ಆನಂದ ನಿಧಿಯಾಗಿಯೂ ಶ್ರೇಷ್ಠನಾಗಿಯೂ ಇದ್ದಾನೆ. ಎಲ್ಲ ಅನುಭವಗಳಿಂದ ರಹಿತನೂ ಎಲ್ಲ ಧ್ಯಾನಗಳಿಲ್ಲದವನೂ ಆಗಿದ್ದಾನೆ. ॥೧೭॥

**ಆತ್ಮಾನಾತ್ಮ ವಿವೇಕಾದಿ ಭೇದಾಭೇದ ವಿವರ್ಜಿತಃ ॥**

ಆತ್ಮನು ಆತ್ಮಾ ಮತ್ತು ಅನಾತ್ಮಗಳ ವಿವೇಕಾದಿಗಳಿಲ್ಲದವನೂ ಭೇದ ಆಭೇದಗಳಿಲ್ಲದವನೂ ಆಗಿದ್ದಾನೆ. ॥೧೮॥

**ಮಹಾವಾಕ್ಯಾರ್ಥತೋ ದೂರೋ ಬ್ರಹ್ಮಾಸ್ಮೀತ್ಯತಿದೂರತಃ ।**

ಆತ್ಮನು ತತ್ತ್ವಮಸ್ಯಾದಿ ಮಹಾವಾಕ್ಯಾರ್ಥಗಳಿಗಿಂತ ದೂರನಾಗಿದ್ದಾನೆ ನಾನು ಬ್ರಹ್ಮನಿದ್ದೆನೆಂಬ ವೃತ್ತಿಗಳಿಗಿಂತ ಬಹಳ ದೂರದಲ್ಲಿದ್ದಾನೆ. ॥೧೯॥

ತಚ್ಛಬ್ದವರ್ಜ್ಯಸ್ತ್ವಂಶಬ್ದಹೀನೋ ವಾಕ್ಯಾರ್ಥವರ್ಜಿತಃ ।

ಆತ್ಮನು 'ತತ್' ಶಬ್ದ ರಹಿತನೂ 'ತ್ವಂ' ಶಬ್ದಹೀನನೂ 'ತತ್ತ್ವಮಸಿ' ವಾಕ್ಯಾರ್ಥ ವರ್ಜಿತನೂ ಆಗಿದ್ದಾನೆ ॥೨೦॥

ಕ್ಷರಾಕ್ಷರವಿಹೀನೋ ಯೋ ನಾದಾಂತಜ್ಯೋತಿರೇವ ಸಃ ।

ಯಾವನು ಮಾಯಾ ಮತ್ತು ಅದರ ಕಾರ್ಯಗಳಿಂದ ರಹಿತನೊ, ನಾದರೂಪನೊ, ಅಂತರ್ಜ್ಯೋತಿರೂಪನೋ, ಅವನೇ ಆತ್ಮನು ॥೨೧॥

ಹನ್ನೆರಡನೇ ಅಧ್ಯಾಯವು ಮುಗಿದುದು

## ನಪುಂಸಕ ಲಿಂಗದ ಸ್ವರೂಪವಾಕ್ಯಗಳು

ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ

ಬ್ರಹ್ಮವು ಕಾರಣವಾದ ಮಾಯೆಗಿಂತಲೂ ಕಾರ್ಯವಾದ ಜಗತ್ತಿಗಿಂತಲೂ ಬೇರೆಯಾಗಿದೆ. ॥೧॥

ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಶ್ಶೋತ್ರಂ ತದಪಾಣಿಪಾದಮ್ ॥

ಬ್ರಹ್ಮವು ಜ್ಞಾನೇಂದ್ರಿಯಗಳಿಗೆ ಅವೇದ್ಯವೂ, ಕರ್ಮೇಂದ್ರಿಯಗಳಿಂದ ಹಿಡಿಯಲಿಕ್ಕೆ ಬಾರದ್ದೂ, ಬ್ರಾಹ್ಮಣಾದಿ ವರ್ಣ ಹಾಗೂ ಕಶ್ಯಪಾದಿಗೋತ್ರಗಳಿಲ್ಲದ್ದೂ ಸ್ವತಃ ಕಣ್ಣು, ಕಿವಿ, ಕೈ ಮತ್ತು ಕಾಲುಗಳಿಲ್ಲದ್ದಾಗಿದೆ. ॥೨॥

**ಸದೇವ ಸೋಮ್ಯ ಇದಮಗ್ರ ಆಸೀದೇಕಮೇವಾದ್ವಿತೀಯಮ್।**

ಹೇ ಪ್ರಿಯದರ್ಶನನೇ, ಈ ನಾಮ, ರೂಪಾತ್ಮಕವಾದ ಜಗತ್ತು ತಾನು ಹುಟ್ಟುವುದಕ್ಕಿಂತ ಮೊದಲು ಸ್ವಗತಾದಿ ಭೇದಗಳಿಲ್ಲದ ಬ್ರಹ್ಮವೇ ಆಗಿತ್ತು. ।।೩।।

**ತದ್ಬ್ರಹ್ಮ ತಾಪತ್ರಯಾತೀತಂ ಷಟ್ಕೋಶವಿನಿರ್ಮುಕ್ತಂ ಷಡೂರ್ಮಿವರ್ಜಿತಂ ಪಂಚಕೋಶಾತೀತಂ ಷಡ್ಭಾವವಿಕಾರ ಶೂನ್ಯಮೇವಮಾದಿಸರ್ವವಿಲಕ್ಷಣಂ ನಿರ್ಗುಣಂ ನಿರುಪಪ್ಲವಂಜ್ಯೋತಿರಭ್ಯಂತರಸರ್ವಮಾಯಾತೀತಮಪ್ರತ್ಯಗೇಕರಸಮ ದ್ವಿತೀಯಮ್ ॥**

ಆ ಬ್ರಹ್ಮವು ಆಧ್ಯಾತ್ಮಿಕಾದಿ ಮೂರು ತಾಪಗಳಿಲ್ಲದ್ದು. ಚರ್ಮ, ಮಾಂಸಮೊದಲಾದ ಆರುಕೋಶಗಳಿಲ್ಲವದ್ದೂ ಜನನಾದಿ ಆರು ಅಲೆಗಳಿಲ್ಲದ್ದೂ ಅನ್ನಮಯಾದಿ ಐದು ಕೋಶಾತಿತವಾದದ್ದೂ 'ಅಸ್ತಿ' ಜಾಯತೇ ಮೊದಲಾದ ಆರುವಿಕಾರಗಳಿಲ್ಲದ್ದೂ ಇವೆಲ್ಲವುಗಳಿಗಿಂತ ವಿಲಕ್ಷಣವಾದದ್ದೂ ಗುಣಗಳಿಲ್ಲದ ಉಪದ್ರವವಿಲ್ಲದ ಸ್ವಯಂ ಪ್ರಕಾಶವಾದದ್ದಾಗಿ ಮಾಯಾತೀತವಾಗಿ ಸ್ವಗತಾದಿ ಭೇದಗಳಿಲ್ಲದೆ ಎಲ್ಲರ ಆತ್ಮವೇ ಆಗಿದೆ. ।।೪।।

**ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾರಸಂ ನಿತ್ಯಮಗಂಧವಚ್ಚಯತ್ ।।**

ಬ್ರಹ್ಮವು ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳಿಲ್ಲದ್ದಾಗಿದೆ. ಆದ್ದರಿಂದ ಅದು ವ್ಯಯವಿಲ್ಲದ್ದಾಗಿ ನಿತ್ಯವಾಗಿದೆ. ॥೫॥

ಪರಂ ವಿಜ್ಞಾನಾದ್ಯದ್ವರಿಷ್ಠ ಪ್ರಜಾನಾಂ ಯದರ್ಚಿಮದ್ಯಣು
ಭ್ಯೋಽಣು ಚ ||

ಪರಬ್ರಹ್ಮವು ಪ್ರಜೆಗಳ ಬುದ್ಧಿಗಿಂತಲೂ ಶ್ರೇಷ್ಠವಾಗಿದೆ ಅದು ಕಿರಣಗಳುಳ್ಳದ್ದಾಗಿ ಅಣುಗಳಿಗಿಂತಲೂ ಅಣುವಾಗಿದೆ. ||೬||

ಏತಜ್ಜ್ಞೇಯಂ , ನಿತ್ಯಮೇವಾತ್ಮಸಂಸ್ಥಂ ನಾತಃ ಪರಂ ವೇದಿ
ತವ್ಯಂ ಹಿ ಕಿಂಚಿತ್ |

ಯಾವಾಗಲೂ ನಿನ್ನ ಹೃದಯದಲ್ಲಿರುವ ಬ್ರಹ್ಮವೇ ತಿಳಿಯಲು ಯೋಗ್ಯವಾಗಿದೆ. ಅದಕ್ಕಿಂತಲೂ ಬೇರೆಯಾಗಿ ತಿಳಿಯಲು ಯೋಗ್ಯ ವಾದದ್ದು ಸ್ವಲ್ಪವೂ ಇರುವುದಿಲ್ಲ. ||೭||

ನ ಶೂನ್ಯಂ ನಾಪಿ ಚಾಕಾರಿ ನ ದೃಶ್ಯಂ ನಾಪಿ ದರ್ಶನಮ್ |

ಅದು ಶೂನ್ಯವಲ್ಲದ್ದು ಆಕಾರವುಳ್ಳದಲ್ಲ. ಮತ್ತು [ನೋಡುವುದಲ್ಲ] ನೋಡಿಸಿಕೊಳ್ಳುವುದಲ್ಲ. ಆದ್ದರಿಂದ ಅದರ ದರ್ಶನವಾಗುವುದಿಲ್ಲ. ||೮||

ದ್ರಷ್ಟೃ ದರ್ಶನ ದೃಶ್ಯಾದಿ ವರ್ಜಿತಂ ತದಿದಂ ಪದಮ್ |

ಆ ಈ ನಮ್ಮ ಸ್ವರೂಪನಾದ ಬ್ರಹ್ಮವು ನೋಡುವವನು. ನೋಡುವುದು ನೋಡಿಸಿಕೊಳ್ಳುವುದೇ ಮೊದಲಾವುಗಳಿಲ್ಲದ್ದಾಗಿದೆ ||೯||

ಅಹೇಯಮನುಪಾದೇಯಮನಾಶ್ರಯಮ್ |

ಬ್ರಹ್ಮವು (ಹೇಯವಲ್ಲದ್ದು.) ತೆಗೆದು ಕೊಳ್ಳಲಿಕ್ಕೂ ತ್ಯಾಗ

ಮಾಡಲಿಕ್ಕೂ ಬಾರದ್ದು. ಮತ್ತು ಮತ್ತೊಂದರ ಆಶ್ರಯವಿಲ್ಲದ್ದಾಗಿದೆ. ॥೧೦॥

**ಸಂಕಲ್ಪ ಸಂಕ್ಷಯವಶಾದ್ಗಲಿತೇ ತು ಚಿತ್ತೇ ಸಂಸಾರ ಮೋಹ ಮಹಿಮಾ ಗಲಿತಾ ಭವಂತಿ ।**
**ಸ್ವಚ್ಛಂ ವಿಭಾತಿ ಶರದೀವ ಖಮಾಗತಾಯಾಂ ಚಿನ್ಮಾತ್ರಮೇಕ ಮಾದ್ಯಮನಂತಮಂತಃ ॥**

ಮನದಲ್ಲಿರುವ ಸರ್ವ ಸಂಕಲ್ಪಗಳು ನಾಶವಾಗುವುದರಿಂದ ಚಿತ್ತವು ನಾಶವಾಗುತ್ತಿರಲು ಸಂಸಾರದ ಮೋಹಮಹಿಮೆಯು ಕ್ಷಯವಾಗುತ್ತದೆ. ಮೋಡವು ನಾಶವಾಗುತ್ತಿರಲು ಶರತ್ಕಾಲದಲ್ಲಿ ಆಕಾಶವು ಸ್ವಚ್ಛವಾಗಿರುವಂತೆ ಜನ್ಮಾದಿಗಳಿಲ್ಲದ ಸತ್ಯ, ಜ್ಞಾನ ಅನಂತವಾದ ಬ್ರಹ್ಮವೇ ಇದೆ ॥೧೧॥

**ಹದಿನಾಲ್ಕನೇ ಪ್ರಕರಣವು ಮುಗಿದಿದೆ.**

**ಆಕಾಶೋ ಹ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ತದಮೃತಮ್ ॥**

ಆತ್ಮನಿಗೆ ಆಕಾಶವೆಂಬ ಹೆಸರಿದೆ ಅವನು ನಾಮರೂಪಗಳಿಗೆ ಆಧಾರವಾಗಿದ್ದಾನೆ. ಅವು ಯಾವುದರ ಒಳಗಿವೆಯೋ, ಅದು ಬ್ರಹ್ಮವು ಅದು ಅಮೃತವು ಅದುವೇ ಆತ್ಮನಾಗಿದೆ. ॥೧॥

ಇದಂ ಸರ್ವಂ ಯದಯಮಾತ್ಮಾ ।
ಯಾವ ಈ ದೃಶ್ಯವಾದದ್ದೆಲ್ಲವೂ ಈ ಆತ್ಮನೇ (ಆಗಿದ್ದಾನೆ) ॥೨॥
ಚಿದೇಕರಸೋ ಹ್ಯಯಮಾತ್ಮಾ ।

ಈ ಆತ್ಮನು ಅರುವಿನ ಘಟ್ಟಿಯಾಗಿರುವನು. ॥೩॥

ನಿರಜಃ ಪರಃ ಆಕಾಶಾದಜ ಆತ್ಮಾ ಮಹಾನ್ ಧ್ರುವಃ ।

ಆತ್ಮನು ಪಾಪರಹಿತನೂ ಆಕಾಶಕ್ಕಿಂತ ಶ್ರೇಷ್ಠನೂ ಜನ್ಮವಿಲ್ಲದವನೂ ವ್ಯಾಪಕನೂ ವಿಕಾರರಹಿತನೂ ಆಗಿದ್ದಾನೆ. ॥೪॥

ಏಕೋ ದೇವಃ ಸರ್ವ ಭೂತೇಷು ಗೂಢಃ ಸರ್ವ ವ್ಯಾಪೀ ಸರ್ವ ಭೂತಾಂತರಾತ್ಮಾ ॥

ಆತ್ಮದೇವನು ಸ್ವಗತಾದಿ ಭೇದರಹಿತನೂ, ಬ್ರಹ್ಮಾದಿ ಸ್ಥಾವರವೇ ಕಡೆಯಾಗಿರುವ ಸರ್ವ ಭೂತಗಳಲ್ಲಿ ಗೂಢನೂ, ಸರ್ವ ವ್ಯಾಪಿಯೂ, ಹಾಗೂ ಸರ್ವ ಭೂತಗಳ ಅಂತರಾತ್ಮನೂ ಆಗಿದ್ದಾನೆ ॥೫॥

ಸರ್ವಕಾರಣಕಾರ್ಯಾತ್ಮಾ ಕಾರ್ಯಕಾರಣವರ್ಜಿತಃ ।

ಎಲ್ಲ ಕಾರ್ಯ ಕಾರಣಗಳಿಗೆ ಆತ್ಮನಾಗಿದ್ದಾನೆ. ಆದರೆ ಅವನಿಗೆ ಕಾರ್ಯ ಕಾರಣಗಳಿರುವುದಿಲ್ಲ. ॥೬॥

ಯಸ್ಯ ಕಿಂಚಿದ್ಬಹಿರ್ನಾಸ್ತಿ ಕಿಂಚಿದಂತಃ ಕಿಯನ್ನ ಚ ।
ಯಸ್ಯ ಲಿಂಗಂ ಪ್ರಪಂಚಂ ವಾ ಬ್ರಹ್ಮೈವಾತ್ಮಾ ನ ಸಂಶಯಃ ॥

ಯಾವನಿಗಿಂತಲೂ ಹೊರಗೆ ಏನೂ ಇರುವುದಿಲ್ಲವೋ, ಯಾವನ

ಒಳಗೆ ಸ್ವಲ್ಪವೂ ಏನೂ ಇರುವದಿಲ್ಲವೋ, ಯಾವನಿಗೆ ಲಿಂಗ ಮತ್ತು ಪ್ರಪಂಚಗಳಿರುವುದಿಲ್ಲವೋ, ಆ ಬ್ರಹ್ಮವೇ ಆತ್ಮನು. ಇದರಲ್ಲಿ ಸಂಶಯವಿರುವುದಿಲ್ಲ. ॥೭॥

## ಹದಿನೈದನೇ ಪ್ರಕರಣ ಮುಗಿದುದು.

**ಓಂಕಾರ ಏವೇದಂ ಸರ್ವಮ್ ।**

ಇದೆಲ್ಲವೂ ಓಂಕಾರವೇ ಆಗಿದೆ. ॥೧॥

**ಸ ಏವಾಧಸ್ತಾತ್ಸ, ಉಪರಿಷ್ಟಾತ್ಸ, ಪಶ್ಚಾತ್ಸ ಪುರಸ್ತಾತ್ಸ ದಕ್ಷಿಣತಃ । ಸ ಉತ್ತರತಃ ಸ ಏವೇದಂ ಸರ್ವಮ್ ।**

ಆ ಆತ್ಮನೇ ಕೆಳಗೆ, ಮೇಲೆ, ಹಿಂದೆ, ಮುಂದೆ, ಬಲ, ಯಡದಲ್ಲಿದ್ದಾನೆ. ಅವನೇ ಇದೆಲ್ಲವೂ ಆಗಿದ್ದಾನೆ. ॥೨॥

**ಅಹಮೇವಾಧಸ್ತಾದಹಮುಪರಿಷ್ಟಾದಹಂ ಪಶ್ಚಾದಹಂ ದಕ್ಷಿಣತೋಽಹಮುತ್ತರತೋಽಹಮೇವೇದಂ ಸರ್ವಮ್ ॥**

ನಾನೇ ಕೆಳಗೆ, ಮೇಲೆ, ಮುಂದೆ, ಹಿಂದೆ, ಬಲ ಎಡಗಳಲ್ಲಿದ್ದೇನೆ. ಇದೆಲ್ಲವೂ ನಾನೇ ಆಗಿದ್ದೇನೆ. ॥೩॥

**ಸಚ್ಚಿದಾನಂದರೂಪಮಿದಂ ಸರ್ವಮ್ ।**

ಇದೆಲ್ಲವೂ ಸಚ್ಚಿದಾನಂದ ರೂಪವಾಗಿದೆ. ॥೪॥

**ಸ್ವಯಂ ಬ್ರಹ್ಮಾ ಸ್ವಯಂ ವಿಷ್ಣುಃ ಸ್ವಯಮಿಂದ್ರಃ ಸ್ವಯಂ**

**ಶಿವಃ । ಸ್ವಯಂ ವಿಶ್ವಮಿದಂ ಸರ್ವಂ ಸ್ವಸ್ಮಾದನ್ಯನ್ನ ಕಿಂಚನ ॥**

ತಾನೇ ಬ್ರಹ್ಮನು ತಾನೇ ವಿಷ್ಣುವು ತಾನೇ ಇಂದ್ರನು ತಾನೇ ಶಿವನು ತಾನೇ ಈ ವಿಶ್ವವೆಲ್ಲವೂ ಆಗಿದ್ದಾನೆ. ತನಗಿಂತಲೂ ಬೇರೆ ಏನೂ ಸ್ವಲ್ಪವು ಇರುವುದಿಲ್ಲ. ॥೫॥

**ಮರುಭೂಮೌ ಜಲಂ ಸರ್ವಂ ಮರುಭೂಮಾತ್ರಮೇವ ತತ್ ।**

ಮರುಳು ಗಾಡಿನ ಭೂಮಿಯಲ್ಲಿ ಕಂಡ ಮೃಗಜಲವೆಲ್ಲವೂ ಮರುಳುಗಾಡಿನ ಭೂಮಿಯೇ ಆಗಿದೆ. ॥೬॥

**ಸಮಸ್ತಂ ಖಲ್ವಿದಂ ಬ್ರಹ್ಮ ಸರ್ವಮಾತ್ಮೇದಮಾತತಮ್ ।**

ಇದೆಲ್ಲವೂ ಬ್ರಹ್ಮವು ಆಭರಣಗಳು ಬಂಗಾರದಿಂದ ವ್ಯಾಪಿಸಿದಂತೆ ಇದೆಲ್ಲವೂ ಆತ್ಮನಿಂದ ವ್ಯಾಪಿಸಲ್ಪಟ್ಟಿದೆ. ॥೭॥

**ನ ತ್ವಂ ನಾಹಂ ನ ಚಾನ್ಯಂ ಸರ್ವಂ ಬ್ರಹ್ಮೈವ ಕೇವಲಮ್**

ನೀನೂ ಇಲ್ಲ ನಾನೂ ಇಲ್ಲ. ಬೇರೆಯು ಜಡವಾದ ಜಗತ್ತೂ ಕೂಡ ಇಲ್ಲ. ಇದೆಲ್ಲವೂ ಕೇವಲ ಬ್ರಹ್ಮವಾಗಿದೆ. ॥೮॥

ಹದಿನಾರನೇ ಪ್ರಕರಣವು ಮುಗಿದುದು

## ಸಾರ್ಥಾಂತಿಕ ಬ್ರಹ್ಮಸ್ವರೂಪ ವಾಕ್ಯಗಳು

**ಸರ್ವಂ ಹ್ಯೇತದ್ಬ್ರಹ । ಅಯಮಾತ್ಮಾ ಬ್ರಹ್ಮ ।**

ಈ ದೃಶ್ಯವಾದ ಕಲ್ಪಿತವಾದ ಜಗವೆಲ್ಲವೂ ಬ್ರಹ್ಮವೇಯಾಗಿದೆ. ಪಂಚಕೋಶಗಳಿಗೆ ಅಧಿಷ್ಠಾನನಾದ ಈ ಆತ್ಮನೇ ಬ್ರಹ್ಮವು. ॥೧॥

**ಸತ್ಯಂ ಜ್ಞಾನಮನಂತಂ ಬ್ರಹ್ಮ ।**

ಶುಭ್ರತ್ವ, ದ್ರವತ್ವ, ಮಧುರತ್ವ ಮಯವಾದದ್ದೇ ಹಾಲೆಂಬಂತೆ ಬ್ರಹ್ಮವು ಸತ್ಯ, ಜ್ಞಾನ, ಅನಂತರೂಪವಾಗಿದೆ. ॥೨॥

**ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ ।**

ಚಿತ್ರಕ್ಕೆ ಪಟವು ಆಧಾರವಾದಂತೆ ಜಗತ್ತಿಗೆ ಅರುವೇ ಆಶ್ರಯ ವಾಗಿದೆ. ಆದ್ದರಿಂದ ಅರುವೇ ಬ್ರಹ್ಮವು. ॥೩॥

**ತದೇತದ್ಬ್ರಹ್ಮಾಪೂರ್ವಮನಪರಮನಂತರಮಬಾಹ್ಯಮ ಯಮಾತ್ಮಾ ಬ್ರಹ್ಮ ಸರ್ವಾನುಭೂಃ ।**

ಬ್ರಹ್ಮವು ಕಾರಣವಿಲ್ಲದ್ದು. ಕಾರ್ಯವಿಲ್ಲದ್ದು. ಒಳ ಹೊರ ಗೆಂಬುದಿಲ್ಲದ್ದು, ಈ ಆತ್ಮನೇ ಬ್ರಹ್ಮವು ಬ್ರಹ್ಮವೇ ಎಲ್ಲವೂ ಆಗಿದೆ. ॥೪॥

**ವಿಜ್ಞಾನಮಾನಂದಂ ಬ್ರಹ್ಮ ।**

ಬ್ರಹ್ಮವು ವಿಜ್ಞಾನ ಆನಂದ ರೂಪವಾಗಿದೆ. ॥೫॥

**ಅಜರೋಽಮರೋಽಮೃತೋಽಭಯೋ ಽ ಬ್ರಹ್ಮಾಭಯಂ ವೈ ಬ್ರಹ್ಮ ।**

ಮುಪ್ಪು, ಮರಣ, ಚಿಂತೆ, ಮತ್ತು ಭಯಗಳಿಲ್ಲದ್ದೇ ಬ್ರಹ್ಮವು ನಿಜವಾಗಿಯೂ ಬ್ರಹ್ಮವು ಭಯರಹಿತವಾಗಿದೆ. ॥೬॥

**ಸರ್ವಭೂತಸ್ಥಮೇಕಂ ನಾರಾಯಣಂ ಕಾರಣಪುರುಷಮ**

**ಕಾರಣಂ ಪರಂಬ್ರಹ್ಮೋಮ್ ॥**

ಓಂಕಾರವಾಚ್ಯವಾದ ಪರಬ್ರಹ್ಮವೇ ಜಗತ್ಕಾರಣವಾಗಿ ಸರ್ವ ಭೂತಗಳಲ್ಲಿದೆ. ಮತ್ತು ಅದಕ್ಕಿ ಬೇರೆ ಕಾರಣಗಳಿರುವುದಿಲ್ಲ. ॥೭॥

**ಆಕಾಶವತ್ಸೂಕ್ಷ್ಮಂ ಕೇವಲಸತ್ತಾಮಾತ್ರಸ್ವಭಾವಂ ಪರಂ ಏಕಮೇವಾದ್ವಿತೀಯಂ ಬ್ರಹ್ಮ ।**

ಪರಬ್ರಹ್ಮವು ಆಕಾಶದಂತೆ ಸೂಕ್ಷ್ಮವಾಗಿ ಕೇವಲ ಸದ್ರೂಪ ವಾಗಿದೆ ಬ್ರಹ್ಮವು ಸ್ವಗತ, ಸಜಾತಿ ಮತ್ತು ವಿಜಾತಿಗಳೆಂಬ ಭೇದ ಗಳಿಲ್ಲದ್ದಾಗಿದೆ. ॥೮॥

**ತನ್ನಿತ್ಯಮುಕ್ತಮನಿಕ್ರಿಯಂ ಸತ್ಯಜ್ಞಾನಾನಂತಾನಂದಪರಿ ಪೂರ್ಣಂ ಸನಾತನಮೇಕಮದ್ವಿತೀಯಂ ಬ್ರಹ್ಮ ॥**

ಆ ಬ್ರಹ್ಮವು ನಿತ್ಯಮುಕ್ತವಾಗಿಯೂ ಷಡ್ಭಾವ ವಿಕಾರವಿಲ್ಲದ್ದಾಗಿಯೂ ಸಚ್ಚಿದಾನಂದ ಪರಿಪೂರ್ಣವಾಗಿಯೂ ಸನಾತನವಾಗಿಯೂ ಸ್ವಗತಾದಿ ಭೇದಗಳಿಲ್ಲದ್ದಾಗಿದೆ. ॥೯॥

**ತತ್ತ್ವಂ ಪದಲಕ್ಷ್ಯಂ ಪ್ರತ್ಯಗಭಿನ್ನಂ ಬ್ರಹ್ಮ.**

ಬ್ರಹ್ಮವು 'ತತ್' ಮತ್ತು 'ತ್ವಂ' ಪದಗಳಿಗೆ ಲಕ್ಷಾರ್ಥ ವಾಗಿಯೂ ಪ್ರತ್ಯಗಾತ್ಮನಿಗಿಂತಲೂ ಬೇರೆಯಲ್ಲದ್ದಾಗಿದೆ. ॥೧೦॥

**ಅಖಂಡಾರ್ಥಂ ಪರಂ ಬ್ರಹ್ಮ । ಸರ್ವಕಾಲಾಬಾಧಿತಂ ಬ್ರಹ್ಮ । ಸಗುಣ ನಿರ್ಗುಣ ಸ್ವರೂಪಂ ಬ್ರಹ್ಮ । ಆದಿ ಮಧ್ಯಾಂತೆ**

**ಶೂನ್ಯಂ ಬ್ರಹ್ಮ । ಮಾಯಾತೀತಂ ಗುಣಾತೀತಂ ಬ್ರಹ್ಮ । ಅದ್ವಿತೀಯಪರಮಾನಂದ ನಿತ್ಯ ಶುದ್ಧ ಬುದ್ಧ ಮುಕ್ತ ಸತ್ಯ ಸ್ವರೂಪ ವ್ಯಾಪಕಾಭಿನ್ನಾಪರಿಚ್ಛಿನ್ನಂ ಬ್ರಹ್ಮ ॥**

ಪರಬ್ರಹ್ಮವು ವಾಚ್ಯಾರ್ಥವೂ ಅಲ್ಲ ಮತ್ತು ಲಕ್ಷಾರ್ಥವೂ ಅಲ್ಲ. ಕಿಂತು ಅಖಂಡಾರ್ಥವಾಗಿದೆ. ತ್ರಿಕಾಲಾಬಾಧ್ಯವಾದದ್ದೇ ಬ್ರಹ್ಮವು. ತುಪ್ಪವೇ ಗಟ್ಟಿ ಮತ್ತು ತಿಳಿ ಎನಿಸಿಕೊಂಡಂತೆ ಪರಬ್ರಹ್ಮವೇ ಸಗುಣ ಮತ್ತು ನಿರ್ಗುಣವೆನಿಸಿಕೊಂಡಿದೆ. ಆದಿ ಮಧ್ಯ ಮತ್ತು ಅಂತಗಳಿಲ್ಲದ್ದೇ ಬ್ರಹ್ಮವು. ಮಾಯೆ ಮತ್ತು ಅದರ ಸತ್ತ್ವಾದಿ ಗುಣಗಳಿಲ್ಲದ್ದೇ ಬ್ರಹ್ಮವು. ತನಗೆರಡನೆಯದ್ದಿಲ್ಲದೆ ಪರಮಾನಂದ ನಿತ್ಯ, ಶುದ್ಧ ಮುಕ್ತ ಸ್ವಭಾವವುಳ್ಳದ್ದೇ ಬ್ರಹ್ಮವು ॥೧೧॥

**ಮನೋ ವಾಚಾಮಗೋಚರಂ ಬ್ರಹ್ಮ । ದೇಶತೋ ಕಾಲತೋ ವಸ್ತುತಃ ಪರಿಚ್ಛೇದ ರಹಿತಂ ಬ್ರಹ್ಮ । ಅಖಿಲ ಪ್ರಮಾಣಾಗೋಚರಂ ಬ್ರಹ್ಮ ॥**

ಬ್ರಹ್ಮವು ಮನ, ವಾಣಿಗಳಿಗೆ ಅಗೋಚರವಾಗಿದೆ. ಅದು ದೇಶ, ಕಾಲ, ವಸ್ತು ಪರಿಚ್ಛೇದಗಳಿಲ್ಲದ್ದಾಗಿದೆ. ಬ್ರಹ್ಮವು ಪ್ರತ್ಯಕ್ಷಾದಿ ಎಂಟು ಪ್ರಮಾಣಗಳಿಗೆ ಗೋಚರವಲ್ಲದ್ದಾಗಿದೆ. ॥೧೨॥

**ತುರೀಯಂ ನಿರಾಕಾರಮೇಕಂ ಬ್ರಹ್ಮ । ಅಸಾವಾದಿತ್ಯೋ ಬ್ರಹ್ಮ ಓಮಿತ್ಯೇತದಕ್ಷರಂ ಪರಂ ಬ್ರಹ್ಮ**

ಬ್ರಹ್ಮವು ಮೂರು ಅವಸ್ಥೆಗಳನ್ನರಿಯುವ ಸಾಕ್ಷಿಯೂ, ನಿರಾಕಾರವೂ ಏಕವೂ ಆಗಿದೆ. ಈ ಸೂರ್ಯನೇ ಬ್ರಹ್ಮವು. ಓಂ ಎಂಬ ಈ ಅಕ್ಷರವೇ ಪರಬ್ರಹ್ಮವು. ॥೧೩॥

**ಚಿನ್ಮಾತ್ರಾತ್ಪರಮಂ ಬ್ರಹ್ಮ ಚಿನ್ಮಾತ್ರಾನ್ನಾಸ್ತಿ ಕೋಽಪಿ ಹಿ ।**
**ಸದೋದಿತಂ ಪರಂ ಬ್ರಹ್ಮ ಜ್ಯೋತಿಷಾಮುದಯೋ ಯತಃ ॥**

ಪರಬ್ರಹ್ಮವು ಅರುರೂಪವಾಗಿದೆ. ಅರುವಿಗಿಂತ ಆಚೆ ಏನೂ ಇರುವುದಿಲ್ಲ. ಯಾವುದರಿಂದ ಸೂರ್ಯಾದಿ ಜ್ಯೋತಿಗಳ ಉದಯವಾಗುತ್ತದೆಯೋ, ಆ ಬ್ರಹ್ಮವು ಯಾವಾಗಲೂ ಇದ್ದು ಬೆಳಗುತ್ತದೆ. ॥೧೪॥

**ಯಸ್ಮಿನ್ಪ್ರಲೀಯತೇ ಶಬ್ದಸ್ತತ್ಪರಂ ಬ್ರಹ್ಮ ಗೀಯತೇ ।**
**ಸತ್ತಾ ಸರ್ವ ಪದಾರ್ಥಾನಾಂ ಗಮ್ಯಂ ಬ್ರಹ್ಮಾಭಿದಂ ಪದಮ್ ॥**

ಎಲ್ಲಿ ಶಬ್ದವು ಲಯವಾಗುತ್ತದೆಯೋ, ಅದು ಪರಬ್ರಹ್ಮವೆಂದು ಹೇಳಿಸಿಕೊಳ್ಳುತ್ತದೆ. ಸರ್ವ ಪದಾರ್ಥಗಳು ಯಾವುದರ ಇರುವಿಕೆಯನ್ನು ಆಶ್ರಯ ಮಾಡಿಕೊಂಡಿರುತ್ತವೆಯೋ, ಅದೇ ಬ್ರಹ್ಮಪದವು. ॥೧೫॥

**ಅಕ್ಷರಂ ಪರಮಂ ಬ್ರಹ್ಮ ನಿರ್ವಿಶೇಷಂ ನಿರಂಜನಮ್ ।**
**ಬ್ರಹ್ಮೈವೈಕಮನಾದ್ಯಂತಮಬ್ಧಿವತ್ಪ್ರವಿಜೃಂಭತೇ ॥**

ಪರಬ್ರಹ್ಮವು ನಾಶರಹಿತವಾಗಿಯೂ ನಿರ್ವಿಶೇಷವಾಗಿಯೂ

ನಿರಂಜನವಾಗಿಯೂ ಇದೆ. ಬ್ರಹ್ಮ ಒಂದೇ ಸೀಮಾರಹಿತವಾಗಿ ಸಾಗರ ದಂತೆ ಶೋಭಿಸುತ್ತದೆ. ॥೧೬॥

**ತದ್ವಿದ್ಯಾ ವಿಷಯಂ ಬ್ರಹ್ಮ ಸತ್ಯಜ್ಞಾನ ಸುಖಾದ್ವಯಮ್ ।**
**ಬ್ರಹ್ಮಣೋಽನ್ಯದಹಂ ನಾಸ್ತಿ ಬ್ರಹ್ಮಣೋಽನ್ಯತ್ಫಲಂ ನಹಿ ॥**

ಸತ್ಯ, ಜ್ಞಾನ ಮತ್ತು ಅದ್ವಯ ಲಕ್ಷಣಾತ್ಮಕವಾದ ಬ್ರಹ್ಮವು (ವಿದ್ಯೆಗೆ) ಜ್ಞಾನಕ್ಕೆ ವಿಷಯುವಾಗಿದೆ, ನಾನು ಬ್ರಹ್ಮಕ್ಕಿಂತ ಬೇರೆಯಾಗಿ ವುದಿಲ್ಲ ಬ್ರಹ್ಮಕ್ಕಿಂತ ಬೇರೆ ಫಲವಿರುವುದಿಲ್ಲ. ॥೧೭॥

**ಬ್ರಹ್ಮಣೋಽನ್ಯದ್ಗುರುನಾಸ್ತಿ ಬ್ರಹ್ಮಣೋಽನ್ಯದಸದ್ವಪುಃ ।**
**ಬೀಜಂ ಮಾಯಾವಿನಿರ್ಮುಕ್ತಂ ಪರಂ ಬ್ರಹ್ಮೇತಿ ಕೀರ್ತ್ಯತೇ ॥**

ಬ್ರಹ್ಮಕ್ಕಿಂತ ಬೇರಾವುದೂ ದೊಡ್ಡದಿಲ್ಲ. ಬ್ರಹ್ಮಕ್ಕಿಂತ ಬೇರೆಯಾಗಿ ರಜ್ಜು ಸರ್ಪದಂತಿರುವ ಶರೀರವು ಅಸತ್ತಾಗಿದೆ. ಮಾಯಾರಹಿತವಾದ ಜಗತ್ತಿಗೆ ವಿವರ್ತೋಪಾದಾನವಾದದ್ದೇ ಪರ ಬ್ರಹ್ಮವೆಂದು ಹೇಳಿಸಿಕೊಳ್ಳುತ್ತದೆ. ॥೧೮॥

**ಸ್ವಾತ್ಮನ್ಯಾರೋಪಿತಾಶೇಷಾಭಾಸವಸ್ತುನಿರಾಸತಃ ।**
**ಸ್ವಯಮೇವ ಪರಂ ಬ್ರಹ್ಮ ಪೂರ್ಣ ಮದ್ವಯಮಕ್ರಿಯಮ್**

ತನ್ನಲ್ಲಿ ಆರೋಪಿತವಾದ ಸಂಪೂರ್ಣವಾದ ಆಭಾಸವಸ್ತುಗಳನ್ನು ನಿರಸನ ಮಾಡುವುದರಿಂದ ತಾನೇ ಪೂರ್ಣವಾದ, ಅದ್ವಯುವಾದ, ಕ್ರಿಯಾರಹಿತವಾದ ಪರಬ್ರಹ್ಮವು. ॥೧೯॥

ರಾಮ ಏವ ಪರಂ ಬ್ರಹ್ಮ ರಾಮ ಏವ ಪರಂ ತಪಃ ।
ರಾಮ ಏವ ಪರಂ ತತ್ತ್ವಂ ಶ್ರೀ ರಾಮೋ ಬ್ರಹ್ಮ ತಾರಕಮ್ ॥

ರಾಮನೇ ಪರಬ್ರಹ್ಮವು ರಾಮನೇ ಶ್ರೇಷ್ಠವಾದ ತಪವು ರಾಮನೇ ಪರತತ್ತ್ವವು ಶ್ರೀ ರಾಮನೇ ಭವ ಸಾಗರವನ್ನು ದಾಟಿಸುವ ಬ್ರಹ್ಮವು. ॥೨೫॥

ಬ್ರಹ್ಮರೂಪತಯಾ ಬ್ರಹ್ಮ ಕೇವಲಂ ಪ್ರತಿಭಾಸತೇ ।
ಜಗದ್ರೂಪತಯಾಪ್ಯೇತದ್ಬ್ರಹ್ಮೈವ ಪ್ರತಿಭಾಸತೇ ॥

ಬ್ರಹ್ಮವೇ ಸಗುಣ ಬ್ರಹ್ಮರೂಪದಿಂದ ಕಂಡು ಬರುತ್ತದೆ. ಇದೇ ಬ್ರಹ್ಮವೇ ಜಗದ್ರೂಪದಿಂದ ಕಂಡುಬರುತ್ತದೆ. ॥೨೬॥

ವಿದ್ಯಾವಿದ್ಯಾದಿಭೇದೇನ ಭಾವಾಭಾವಾದಿ ಭೇದತಃ ।
ಗುರು ಶಿಷ್ಯಾದಿ ಭೇದೇನ ಬ್ರಹ್ಮೈವ ಪ್ರತಿಭಾಸತೇ ॥

ಬ್ರಹ್ಮವೇ ವಿದ್ಯೆ, ಅವಿದ್ಯೆ ಮೊದಲಾದವುಗಳ ಭೇದದಿಂದ ಭಾವ, ಅಭಾವಾದಿಗಳ ಭೇದದಿಂದ ಗುರುಶಿಷ್ಯಾದಿ–ಭೇದದಿಂದ ಕಂಡು ಬರುತ್ತದೆ. ॥೨೭॥

ಕಾಲೋ ಬ್ರಹ್ಮ ಕಲಾ ಬ್ರಹ್ಮ ಸುಖಂ ಬ್ರಹ್ಮ ಸ್ವಯಂ ಪ್ರಭಮ್ । ಏವಂ ಬ್ರಹ್ಮ ದ್ವಯಂ ಬ್ರಹ್ಮ ಮೋಹೋ ಬ್ರಹ್ಮ ಶಮಾದಿಕಮ್ । ದೋಷೋ ಬ್ರಹ್ಮ ಗುಣೋ ಬ್ರಹ್ಮ ದಮಃ ಶಾಂತಂ ವಿಭುಃ ಪ್ರಭುಃ ।

ಮೂರುಕಾಲಗಳು, ಹದಿನಾರು, ಕಲೆಗಳು, ಸುಖ ಮತ್ತು

ಪ್ರಕಾಶಗಳೂ ಪರಬ್ರಹ್ಮವೇ ಆಗಿದೆ. ದ್ವೈತ ಮೋಹ ಶಮದಮಾದಿಗಳು ಗುಣದೋಷಗಳೂ ಬ್ರಹ್ಮವೇ ಆಗಿದೆ. ಮತ್ತು ದಮವಾದದ್ದು ಶಾಂತವಾದದ್ದು ಪ್ರಭೆಯಾದದ್ದೂ ಬ್ರಹ್ಮವೇ ||೨೮||

**ಲೋಕೋ ಬ್ರಹ್ಮ ಗುರುರ್ಬ್ರಹ್ಮ ಶಿಷ್ಯೋ ಬ್ರಹ್ಮ ಸದಾಶಿವಃ । ಪೂರ್ವಮ್ ಬ್ರಹ್ಮ ಪರಂ ಬ್ರಹ್ಮ ಶುದ್ಧಂ ಬ್ರಹ್ಮ ಶುಭಾಶುಭಮ್ । ಜೀವ ಏವ ಸದಾ ಬ್ರಹ್ಮ ಸ್ವಯಂ ಬ್ರಹ್ಮ ಸನಾತನಮ್ ।**

ಜಗತ್ತು, ಜಗತ್ತಿನಲ್ಲಿರುವ ಜನರೂ, ಜ್ಞಾನವನ್ನುಪದೇಶ ಮಾಡುವ ಗುರುವು, ಅದನ್ನು ಪಡೆಯುವ ಶಿಷ್ಯನೂ, ಜಗತ್ತನ್ನಾಳುವ ಶಿವನೂ ಬ್ರಹ್ಮವೇ. ಕಾರಣವು ಬ್ರಹ್ಮವೇ ಕಾರ್ಯವೂ ಬ್ರಹ್ಮವೇ ಶುಭ ಅಶುಭಗಳೂ ಬ್ರಹ್ಮವೇ ಜೀವನು ಯಾವಾಗಲೂ ಬ್ರಹ್ಮವಾಗಿದ್ದಾನೆ, ಆ ಬ್ರಹ್ಮವು ಸನಾತನವಾಗಿದೆ. ||೨೯||

## ಹದಿನೇಳನೇ ಪ್ರಕರಣವು ಮುಗಿದುದು

**ಸರ್ವವಿಶೇಷಂ ನೇತಿ ನೇತೀತಿ ವಿಹಾಯ ಯದವಶಿಷ್ಯತೇ ತದದ್ವಯಂ ಬ್ರಹ್ಮ ||**

**ಜೀವಭಾವಜದ್ಭಾವಬಾಧೇ ಶ್ರುತ್ಯಗಭಿನ್ನಂ ಬ್ರಹ್ಮೈವಾವಶಿಷ್ಯತೇ||**

ಎಲ್ಲ ವಿಶೇಷಗಳನ್ನು ಇದಲ್ಲ ಇದಲ್ಲವೆಂದು ಬಿಟ್ಟು ಯಾವದು ನೇತಿಗಳೆಯಲ್ಲಿಕ್ಕೆ ಬಾರದೇ ಉಳಿಯುತ್ತದೆಯೋ, ಅದು ಅದ್ವಯವಾದ

ಬ್ರಹ್ಮವು. ಕರ್ಣನಿಗೆ ನಾನು ರಾಧಾಪುತ್ರನೆಂಬ ಭಾವನೆಯುಂಟಾದಂತೆ ತೋರುವ ಜೀವಭಾವ ಜಗದ್ಭಾವನೆಗಳನ್ನು ಸ್ವರೂಪ ಜ್ಞಾನದಿಂದ ಮಿಥ್ಯೆಯೆಂದು ನಿಶ್ಚಯ ಮಾಡುತ್ತಿರಲು ಪ್ರತ್ಯಗಾತ್ಮನಾದ ತನಗಿಂತ ಬೇರೆಯಲ್ಲದ ಬ್ರಹ್ಮವೇ ಉಳಿಯುತ್ತದೆ. ॥೧॥

**ಕಾರ್ಯೋಪಾಧಿರಯಂ ಜೀವ: ಕಾರಣೋಪಾಧಿರೀಶ್ವರಃ ।**
**ಕಾರ್ಯಕಾರಣತಾಂ ಹಿತ್ವಾ ಪೂರ್ಣಬೋಧೋಽವಶಿಷ್ಯತೇ ॥**

ಒಂದೇ ಆಕಾಶವು ಘಟ ಮಠಗಳೆಂಬ ಉಪಾಧಿಗಳಿಂದ ಘಟಾಕಾಶ ಮಠಾಕಾಶವೆನಿಸಿಕೊಂಡಂತೆ ಒಂದೇ ಬ್ರಹ್ಮವು ಅವಿದ್ಯೋಪಾಧಿಯಿಂದ ಜೀವನೆಂದು ಮಾಯೋಪಾಧಿಯಿಂದ ಈಶ್ವರನೆಂದು ಹೇಳಿಸಿಕೊಂಡಿದೆ. ಅವಿದ್ಯೆ ಮತ್ತು ಮಾಯೆಗಳನ್ನು ಬಿಟ್ಟರೆ ಜ್ಞಾನರೂಪ ಪೂರ್ಣಬ್ರಹ್ಮವೇ ಉಳಿಯುತ್ತದೆ. ॥೨॥

ಸಂಕಲ್ಪಮನಸೀ ಭಿನ್ನೇ ನ ಕದಾಚನ ಕೇನಚಿತ್ ಃ
ಸಂಕಲ್ಪ ಜಾತೇ ಗಲಿತೇ ಸ್ವರೂಪಮವಶಿಷ್ಯತೇ ॥

ಆತ್ಮನಿಗಿಂತಲೂ ಕಲ್ಪಿತವಾದ ಮನ ಮತ್ತು ಸಂಕಲ್ಪಗಳೂ ಎಂದೂ ಬೇರೆ ಯಾಗಿರುವುದಿಲ್ಲ. ಯಾವುದಾದರೊಂದು ಸಾಧನೆಯಿಂದ ಸಕಲ ಸಂಕಲ್ಪಗಳು ನಾಶವಾಗುತ್ತಿರಲು ಸ್ವರೂಪವೇ ಉಳಿಯುತ್ತದೆ. ॥೩॥

**ಸಮತಾ ಸರ್ವಭೂತೇಷು ಯಾಽಸೌ ಸತ್ಯ ಪರಾಸ್ಥಿತಿ: ।**
**ಪರಮಾನ್ಮೃತನಾಮ್ನೀ ಸಾ ಸಮತ್ವೈವಾವಶಿಷ್ಯತೇ ॥**

ಸರ್ವಭೂತಗಳಲ್ಲಿ ಒಂದು ಸದ್ರೂಪವಾದ ಬ್ರಹ್ಮವೇ ಇರುತ್ತದೆಂಬ ಯಾವ ಸಮತ್ತ್ವ ಸ್ಥಿತಿಯು ಇದೆಯೋ, ಆ ಪರಮಾಮೃತವೆಂಬ ಹೆಸರಿನ ಸಮತ್ತ್ವವೇ ಉಳಿಯುತ್ತದೆ. ॥೪॥

**ಸಾ ಹಿ ವಾಚಾಮಗಮ್ಯತ್ವಾದಸತಾಮಿವ ಶಾಶ್ವತೀಮ್ ।**
**ನೈರಾತ್ಮ್ಯ ಸಿದ್ಧಾಂತದಶಾಮುಪಯಾತೇಽವಶಿಷ್ಯತೇ ॥**

ಸದ್ರೂಪಬ್ರಹ್ಮವು ವಾಣಿಗೆ ಅಗೋಚರವಾದ್ದರಿಂದ ಅಸತ್ತಿನಂತೆ ಬೌದ್ಧನ ಶೂನ್ಯವಾದದ ಅವಸ್ಥೆಯನ್ನು ಪಡೆದುಕೊಂಡು ಉಳಿಯುತ್ತದೆ. ॥೫॥

**ಯಾವದ್ಯಾವನ್ಮುನಿಶ್ರೇಷ್ಠ ಸ್ವಯಂ ಸಂತ್ಯಜತೇಽಖಿಲಮ್ ।**
**ತಾವತ್ತಾವತ್ಪರಾಲೋಕಃ ಪರಮಾತ್ಮೈವಾವಶಿಷ್ಯತೇ ॥**

ಹೇ ಶ್ರೇಷ್ಠನಾದ ಮುನಿಯೇ ನೀನು ಎಲ್ಲವನ್ನು ಯಾವಾಗ ಬಿಡುತ್ತೀಯೋ. ಆಗ ಶ್ರೇಷ್ಠಪ್ರಕಾಶರೂಪನಾದ ಪರಮಾತ್ಮನೇ ಉಳಿಯುತ್ತಾನೆ. ॥೬॥

**ಅಭ್ಯಾಸೇನ ಪರಿಸ್ಪಂದೇ ಪ್ರಾಣಾನಾಂ ಕ್ಷಯಮಾಗತೇ ।**
**ಮನಃ ಪ್ರಶಮಮಾಯಾತಿ ನಿರ್ವಾಣಮವಶಿಷ್ಯತೇ ॥**

ಅಭ್ಯಾಸದಿಂದ ಪ್ರಾಣಾಪಾನಗಳ ಗತಿಯು ಕ್ಷಯವಾಗುತ್ತಿರಲು ಮನವು ಲಯವಾಗುತ್ತದೆ. ಆಗ ಮುಕ್ತ ಸ್ಥಿತಿಯು ಉಳಿಯುತ್ತದೆ. ॥೭॥

**ಜ್ಞೇಯವಸ್ತು ಪರಿತ್ಯಾಗೇ ವಿಲಯಂ ಯಾತಿ ಮಾನಸಮ್ ।**

ಮಾನಸೇ ವಿಲಯಂ ಯಾತೇ ಕೈವಲ್ಯಮವಶಿಷ್ಯತೇ ||

ಕಾಣುವ ವಸ್ತುಗಳನ್ನು ಮಿಥ್ಯೆ ಎಂದು ತಿಳಿದು ತ್ಯಾಗ ಮಾಡಲು ಮನವು ಲಯವಾಗುತ್ತದೆ. ಆಗ ಕೇವಲ ಬ್ರಹ್ಮವೇ ಉಳಿಯುತ್ತದೆ ||೮||

ಸರ್ವವೇದಾಂತಸಿದ್ಧಾಂತಸಾರಂ ವಚ್ಮಿ ಯಥಾರ್ಥತಃ ।
ಸ್ವಯಂ ಮೃತ್ವಾ ಸ್ವಯಂ ಭೂತ್ವಾ ಸ್ವಯಮೇವಾವಶಿಷ್ಯತೇ||

ನಾನು ಸಕಲ ಉಪನಿಷತ್ತುಗಳ ನಿರ್ಣಯವನ್ನು ಯಥಾರ್ಥವಾಗಿ ಹೇಳುತ್ತೇನೆ. ಕೇಳಿರಿ. ತಾನೇ ಸತ್ತು ತಾನೇ ಹುಟ್ಟಿದಂತಾಗಿ ಕೊನೆಗೆ ಅಧಿಷ್ಠಾನರೂಪದಿಂದ ತಾನೇ ಉಳಿಯುತ್ತಾನೆ.

ಹದಿನೆಂಟನೇ ಪ್ರಕರಣವು ಮುಗಿದಿದೆ.

## ಸಾಂಪ್ರದಾಯಿಕ ಫಲ ವಾಕ್ಯಗಳು

ಸ ಯೋ ಹ ವೈ ತತ್ಪರಮ್। ಬ್ರಹ್ಮವೇದ ಬ್ರಹ್ಮೈವ ಭವತಿ||
ಬ್ರಹ್ಮವಿದಾಪ್ನೋತಿ ಪರಮ್। ಬ್ರಹ್ಮಸಂಸ್ಥೋಽಮೃತತ್ವಮೇತಿ ||

ಯಾವನು ಪರಬ್ರಹ್ಮವೇ ನಾನೆಂದು ದೃಢವಾಗಿ ತಿಳಿಯುತ್ತಾನೆಯೋ, ಅವನು ಬ್ರಹ್ಮವೇ ಆಗುತ್ತಾನೆ. ಬ್ರಹ್ಮವನ್ನು ತಿಳಿದವನು

ಬ್ರಹ್ಮವೇ ಆಗುತ್ತಾನೆ. ಯಾವನ ಮನವು ಬ್ರಹ್ಮದಲ್ಲಿ ನಿಲ್ಲುತ್ತದೆಯೋ, ಅವನು ಮುಕ್ತನಾಗುತ್ತಾನೆ ॥ ॥

**ತರತಿ ಶೋಕಮಾತ್ಮವಿತ್। ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಸ ಇದಂ ಸರ್ವಂ ಭವತಿ॥**

ಆತ್ಮನನ್ನು ತಿಳಿದವನು ಶೋಕವನ್ನು ದಾಟುತ್ತಾನೆ. ಯಾವನು ತಾನೇ ಬ್ರಹ್ಮವೆಂದು ತಿಳಿಯುತ್ತಾನೆಯೋ, ಅವನು ಸರ್ವಾತ್ಮಭಾವವನು ಪಡೆಯುತ್ತಾನೆ. ॥೨॥

**ಯ ಏವಂ ನಿರ್ಬೀಜಂ ವೇದ ನಿರ್ಬೀಜ ಏವ ಸ ಭವತಿ। ತದ್ಬ್ರಹ್ಮೈವಾಹಮಸ್ಮೀತಿ ಬ್ರಹ್ಮಪ್ರಣವಮನುಸ್ಮರನ್ ಭ್ರಮರಕೀಟನ್ಯಾಯೇನ ಶರೀರತ್ರಯಮುತ್ಸೃಜ್ಯ ಸಂನ್ಯಾಸೇನೈವ ದೇಹತ್ಯಾಗಂ ಕರೋತಿ ಸ ಕೃತಕೃತ್ಯೋ ಭವತಿ॥**

ಯಾವನು ಈ ಪ್ರಕಾರ ನಿರ್ಬೀಜರೂಪ ಬ್ರಹ್ಮವನ್ನು ತಿಳಿಯುತ್ತಾನೆಯೋ, ಅವನು ನಿರ್ಬೀಜವೇ ಆಗುತ್ತಾನೆ. ಆ ಬ್ರಹ್ಮವೇ ನಾನಿದ್ದೇನೆಂದು ಓಂಕಾರವನ್ನು ಬ್ರಹ್ಮವೆಂದು ಚಿಂತಿಸುತ್ತಾ "ಕೀಟವು ಭ್ರಮರವನ್ನು ಚಿಂತಿಸಿ ಭ್ರಮರವಾದಂತೆ, ಮೂರು ಶರೀರಗಳನ್ನು ಬಿಟ್ಟು ಸಂನ್ಯಾಸದಿಂದ ದೇಹವನ್ನು ಬಿಡುತ್ತಾನೆಯೋ, ಅವನ ಮಾತ ಬೇಕಾದದ್ದನ್ನೆಲ್ಲಾ ಮಾಡಿ ಮುಗಿಸಿದವನಾಗುತ್ತಾನೆ. ॥೩॥

ತಮೇವ ಜ್ಞಾತ್ವಾ ವಿದ್ವಾನ್ಮೃತ್ಯುಮುಖಾತ್ಪ್ರಮುಚ್ಯತೇ ।
ತದೇವ ವಿದ್ವಾಂಸಃ ಇಹೈವಾಮೃತಾ ಭವಂತಿ ॥

ಆತ್ಮನನ್ನು ತಿಳಿದ ವಿದ್ವಾಂಸನು ಮೃತ್ಯುವಿನ ಬಾಯಿಯಿಂದ ಮುಕ್ತನಾಗುತ್ತಾನೆ. ಬ್ರಹ್ಮವೇ ತಾವೆಂದು ತಿಳಿದ ವಿದ್ವಾಂಸರು ಬದುಕಿರುವಾಗಲೇ ಅಮೃತರಾಗುತ್ತಾರೆ ॥೨೦॥

ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯು ಮುಖಾಪ್ರಮುಚ್ಯತೇ ॥ ಯಜ್ಜ್ಞಾತ್ವಾ ಮುಚ್ಯತೇ ಜಂತುರ ಮೃತತ್ತ್ವಂ ಚ ಗಚ್ಛತಿ ॥

ಜನ್ಮ, ಮರಣಗಳಿಲ್ಲದ ಮಹತತ್ತ್ವಕ್ಕಿಂತ ಆಚೆ ಇರುವ ನಿರ್ವಿ ಕಾರನಾದ ಆತ್ಮನೇ ನಾನೆಂದು ತಿಳಿದುಕೊಂಡು ಮೃತ್ಯುವಿನ ಮುಖ ದಿಂದ ಮುಕ್ತನಾಗುತ್ತಾನೆ. ಜೀವಿಯು ಯಾವುದನ್ನು ತಿಳಿದುಕೊಂಡು ಮೋಕ್ಷವನ್ನು ಪಡೆಯುತ್ತದೆಯೋ ಅದುವೇ ಬ್ರಹ್ಮವು. ॥೨೧॥

ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ ತದಾ ವಿದ್ವಾನ್ಪುಣ್ಯ ಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯ ಮುಪೈತಿ ॥

ಸಾಧಕನು ಯಾವಾಗ ಪ್ರಕಾಶರೂಪನಾದ ಜಗತ್ಕರ್ತೃವಾದ

ಆಳುವವನಾದ ಬ್ರಹ್ಮನಿಗೂ ಕಾರಣನಾದ ಪುರುಷನನ್ನು ನೋಡು ತ್ತಾನೆಯೋ, ಆಗ ವಿದ್ವಾಂಸನು ಪುಣ್ಯ, ಪಾಪಗಳನ್ನು ಕೊಡವಿಕೊಂಡು ಬ್ರಹ್ಮದೊಡನೆ ಸಮರಸನಾಗುತ್ತಾನೆ. ॥೨೨॥

**ಏತದ್ಯೋ ವೇದ ನಿಹಿತಂ ಗುಹಾಯಾಂ ಸೋಽವಿದ್ಯಾಗ್ರಂಥಿಂ ವಿಕಿರತೀಹ ಸೋಮ್ಯ ।**

ಎಲೈ ಸಾಧುವೇ, ಯಾವನು ಬುದ್ಧಿ ಎಂಬ ಗುಹೆಯಲ್ಲಿರುವ ಆತ್ಮನೇ ನಾನೆಂದು ತಿಳಿಯುತ್ತಾನೆಯೋ, ಅವನು ಬದುಕಿರುವಾಗಲೇ ಅವಿದ್ಯೆಯ ಗಂಟನ್ನು ನಾಶವಮಾಡಿಕೊಳ್ಳುತ್ತಾನೆ. ॥೨೩॥

**ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇಽಸ್ತಂ ಗಚ್ಛಂತಿ ನಾಮರೂಪೇ ವಿಹಾಯ ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಮ್ ॥**

ಗಂಗಾದಿ ನದಿಗಳು ಹರಿಯುತ್ತಾ ಹೋಗಿ ತಮ್ಮ ನಾಮ ರೂಪು ಗಳನ್ನು ಬಿಟ್ಟು ಸಮುದ್ರದಲ್ಲಿ ಒಂದಾಗುವಂತೆ ನಾಮ, ರೂಪುಗಳನ್ನು ಬಿಟ್ಟು ವಿದ್ವಾಂಸನು ಬ್ರಹ್ಮದಲ್ಲಿ ಒಂದಾಗುತ್ತಾನೆ. ॥೨೪॥

**ಜ್ಞಾತ್ವಾ ತಂ ಮೃತ್ಯುಮತ್ಯೇತಿ ನಾನ್ಯಃ ಪಂಥಾಃ ವಿಮುಕ್ತಯೇಃ ।**

**ತದ್ಬ್ರಹ್ಮಾಹಮಿತಿ ಜ್ಞಾತ್ವಾ ಬ್ರಹ್ಮ ಸಂಪದ್ಯತೇ ಧ್ರುವಮ್ ॥**

ಆತ್ಮನನ್ನು ತಿಳಿದು ಮೃತ್ಯುವನ್ನು ದಾಟುತ್ತಾನೆ. ಜ್ಞಾನವನ್ನು ಬಿಟ್ಟು ಮುಕ್ತಿಗೆ ಬೇರೆ ಮಾರ್ಗಗಳಿರುವುದಿಲ್ಲ. ಆ ಬ್ರಹ್ಮವೇ ನಾನೆಂದು ತಿಳಿದುಕೊಂಡು ನಿರ್ವಿಕಾರವಾದ ಬ್ರಹ್ಮವನ್ನೇ ಪಡೆಯುತ್ತಾನೆ.॥೨೫॥

ಯತ್ರ ಯತ್ರ ಮೃತೋ ಜ್ಞಾನೀ ಪರಮಾಕ್ಷರವಿತ್ಸದಾ ಪರ
ಬ್ರಹ್ಮಣಿ ಲೀಯತೇ ನ ತಸ್ಯೋತ್ಕ್ರಾಂತಿರಿಷ್ಯತೇ ॥

ಯಾವಾಗಲೂ ಪರಬ್ರಹ್ಮವೇ ನಾನೆಂದು ತಿಳಿದ ಜ್ಞಾನಿಯು ಎಲ್ಲಿ ಎಲ್ಲಿ ಯಾವಾಗ ದೇಹ ಬಿಡುತ್ತಾನೆಯೋ, ಅವನು ಅಲ್ಲಿಯೇ ಪರಬ್ರಹ್ಮದಲ್ಲಿ ಲಯವಾಗುತ್ತಾನೆ. ಅವನಿಗೆ ಗಮನವಿರುವುದಿಲ್ಲ॥೨೬॥

ಯದ್ಯತ್ಸ್ವಾಭಿಮತಂ ವಸ್ತು ತತ್ತತ್ತ್ಯಜನ್ಮೋಕ್ಷಮಶ್ನುತೇ ।

ಯಾವ ಯಾವುದು ತನಗೆ ಇಷ್ಟವಾದ ವಸ್ತುವಿದೆಯೋ, ಅದನ್ನು ತ್ಯಾಗಮಾಡುತ್ತಾ ಮೋಕ್ಷವನ್ನು ಪಡೆಯುತ್ತಾನೆ. ॥೨೭॥

ಅಸಂಕಲ್ಪನಶಸ್ತ್ರೇಣ ಛಿನ್ನಂ ಚಿತ್ತಮಿದಂ ಯದಾ ।
ಸರ್ವಂ ಸರ್ವಗತಂ ಶಾಂತಂ ಬ್ರಹ್ಮಸಂಪದ್ಯತೇ ತದಾ ॥

ಯಾವಾಗ ಅಸಂಕಲ್ಪವೆಂಬ ಶಸ್ತ್ರದಿಂದ ಈ ಚಿತ್ತವು ಕತ್ತರಿಸಲ್ಪಡುತ್ತದೆಯೋ, ಆಗ ಸರ್ವವ್ಯಾಪಕವಾದ ಸರ್ವಾತ್ಮಕವಾದ ಶಾಂತವಾದ ಬ್ರಹ್ಮವನ್ನು ಪಡೆಯುತ್ತಾನೆ. ॥೨೮॥

**ಪ್ರಿಯೇಷು ಸ್ವೇಷು ಸುಕೃತಮಪ್ರಿಯೇಷು ಚ ದುಷ್ಕೃತಮ್ ।**
**ವಿಸೃಜ್ಯ ಧ್ಯಾನಯೋಗೇನ ಬ್ರಹ್ಮಾಪ್ಯೇತಿ ಸನಾತನಮ್ ॥**

ಜ್ಞಾನಿಯು ತನ್ನ ಸೇವೆಯನ್ನು ಮಾಡುವವರಲ್ಲಿ ಪುಣ್ಯವನ್ನು ಪೀಡಿಸುವವರಲ್ಲಿ ಪಾಪವನ್ನು ತ್ಯಾಗಮಾಡಿ ಧ್ಯಾನಯೋಗದಿಂದ ಸನಾತನವಾದ ಬ್ರಹ್ಮವನ್ನು ಪಡೆಯುತ್ತಾನೆ ॥೨೯॥

**ಘಟಾಕಾಶಮಿವಾತ್ಮಾನಂ ವಿಲಯಂ ವೇತ್ತಿ ತತ್ತ್ವತಃ ।**
**ಸ ಗಚ್ಛತಿ ನಿರಾಲಂಬಂ ಜ್ಞಾನಾಲೋಕಂ ಸನಾತನಮ್ ॥**

ಯಾವನು ಘಟಾಕಾಶವು ಮಹಾಕಾಶದಲ್ಲಿ ಲಯವಾದಂತೆ ನನ್ನ ಆತ್ಮವು ಬ್ರಹ್ಮದಲ್ಲಿ ಲಯವಾಗುತ್ತದೆಂದು ಇದ್ದಕ್ಕಿದ್ದಂತೆ ತಿಳಿಯುತ್ತಾನೆಯೋ, ಅವನು ನಿರಾಲಂಬವಾದ, ಸ್ವಯಂ ಪ್ರಕಾಶವಾದ, ಸನಾತನ ಬ್ರಹ್ಮವನ್ನು ಪಡೆಯುತ್ತಾನೆ. ॥೩೦॥

**ತೃಣಾಗ್ರೇಷ್ವಂಬರೇ ಭಾನೌ ನರನಾಗಾಮರೇಷು ಚ ।**
**ಯಸ್ತಿಷ್ಠತಿ ತದೇವಾಹಮಿತಿ ಮತ್ವಾ ನ ಶೋಚತಿ ॥**

ಹುಲ್ಲುಕಡ್ಡಿಗಳ ತುದಿಗಳಲ್ಲಿ, ಆಕಾಶದಲ್ಲಿ, ಸೂರ್ಯನಲ್ಲಿ, ಮಾನವ, ಸರ್ಪ ಮತ್ತು ದೇವತೆಗಳಲ್ಲಿ ಯಾವನಿರುತ್ತಾನೆಯೋ, ಅವನೇ ನಾನಾಗಿದ್ದೇನೆಂದು ತಿಳಿದು ದುಃಖಿಸುವುದಿಲ್ಲ. ॥೩೧॥

ಸರ್ವಸಾಕ್ಷಿಣಮಾತ್ಮಾನಂ ವರ್ಣಾಶ್ರಮವಿವರ್ಜಿತಮ್ ।
ಬ್ರಹ್ಮರೂಪತಯಾ ಪಶ್ಯನ್ ಬ್ರಹ್ಮೈವ ಭವತಿ ಸ್ವಯಮ್ ।

ಬ್ರಾಹ್ಮಣಾದಿ ವರ್ಣ, ಬ್ರಹ್ಮಚರ್ಯಾದಿ ಆಶ್ರಮಗಳಿಲ್ಲದ ಅವಸ್ಥಾತ್ರಯ ಸಾಕ್ಷಿಯಾದ ಆತ್ಮನೇ ಬ್ರಹ್ಮವೆಂದು ನೋಡುತ್ತಾ ಬ್ರಹ್ಮವೇ ಆಗುತ್ತಾನೆ. ॥೩೨॥

ತದ್ಬ್ರಹ್ಮಾನಂದಮದ್ವಂದ್ವಂ ನಿರ್ಗುಣಂ ಸತ್ಯ ಚಿದ್ಘನಮ್ ।
ವಿದಿತ್ವಾ ಸ್ವಾತ್ಮನೋ ರೂಪಂ ನ ಬಿಭೇತಿ ಕುತಶ್ಚನ ॥

ದ್ವಂದ್ವವಿಲ್ಲದ, ಮೂರು ಗುಣಗಳಿಲ್ಲದ ಸತ್ಯವೂ ಚಿದ್ಘನವೂ ಆದ, ಬ್ರಹ್ಮವೇ ತನ್ನ ಸ್ವರೂಪವೆಂದು ತಿಳಿದುಕೊಂಡು ಯಾವುದರಿಂದಲೂ ಹೆದರುವುದಿಲ್ಲ. ॥೩೩॥

ವಾಸನಾಂ ಸಂಪರಿತ್ಯಜ್ಯ ಮಯಿ ಚಿನ್ಮಾತ್ರವಿಗ್ರಹೇ ।
ಯಸ್ತಿಷ್ಠತಿ ಗತಸ್ನೇಹಃ ಸೋऽಹಂ ಸಚ್ಚಿತ್ಸುಖಾತ್ಮಕಃ ॥

ಯಾವನು ವಾಸನೆಗಳೆಲ್ಲವನ್ನೂ ಬಿಟ್ಟು, ಸ್ನೇಹವನ್ನು ಬಿಟ್ಟು, ಅರುವಿನ ಗಟ್ಟಿಯಾದ ನನ್ನಲ್ಲಿರುತ್ತಾನೆಯೋ, ಆ ಸಚ್ಚಿದಾನಂದರೂಪನೇ ನಾನು. ಎಂದು ಪರಮಾತ್ಮನು ಹೇಳುತ್ತಾನೆ. ॥೩೪॥

ಹತ್ತೊಂಭತನೇ ಪ್ರಕರಣವು ಮುಗಿದಿದೆ.

ಓಂ

## ಸಾರ್ವಾಂತಿಕ ವಿದೇಹ ಮುಕ್ತಿಯ ವಾಕ್ಯಗಳು.

**ವಿಮುಕ್ತಶ್ಚ ವಿಮುಚ್ಯತೇ । ಗುಹಾಗ್ರಂಥಿಭ್ಯೋ ವಿಮುಕ್ತೋಽಮೃತೋ ಭವತಿ ।**

ಮುಕ್ತನು ಮುಕ್ತನಾಗುತ್ತಾನೆ. [ಜೀವನ್ಮುಕ್ತನು ವಿದೇಹಮುಕ್ತನಾಗುತ್ತಾನೆ.] ಹೃದಯದ ಗಂಟುಗಳಿಂದ ಬಿಡುಗಡೆಯಾದವನು ಮುಕ್ತನಾಗುತ್ತಾನೆ. ॥೧॥

**ಅಥಾಕಾಮಯಮಾನೋ ಯೋಽಕಾಮೋ ನಿಷ್ಕಾಮ ಆತ್ಮಕಾಮ ಆಪ್ತಕಾಮೋ ನ ತಸ್ಯ ಪ್ರಾಣಾ ಉತ್ಕ್ರಾಮಂತ್ಯತ್ರೈವ ಸಮವಲೀಯಂತೇ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ॥**

ಯಾವ ಜ್ಞಾನಿಯು ಕಾಮನೆಗಳಿಲ್ಲದವನೂ ಆತ್ಮನನ್ನೇ ಬಯಸುವವನೂ ಹೊಂದಲ್ಪಟ್ಟ ಕಾಮನೆಗಳುಳ್ಳವನೂ ಆಗಿದ್ದಾನೆಯೋ, ಅವನ ಪ್ರಾಣ ಮತ್ತು ಇಂದ್ರಿಯಗಳು ಬೇರೆ ಕಡೆಗೆ ಗಮನ ಮಾಡುವುದಿಲ್ಲ. ಬ್ರಹ್ಮದಲ್ಲಿಯೇ ಒಂದಾಗುತ್ತವೆ. ಅವನು ಬ್ರಹ್ಮನಾಗಿಯೇ ಬ್ರಹ್ಮವನ್ನು ಹೊಂದುತ್ತಾನೆ. ॥೨॥

**ಪೃಥಿವ್ಯಪ್ಸು ಪ್ರಲೀಯತೇ ಆಪೋ ಜ್ಯೋತಿಷಿ ಲೀಯಂತೇ ಜ್ಯೋತಿರ್ವಾಯೌ ಪ್ರಲೀಯತೇ ವಾಯುರಾಕಾಶ ಆಕಾಶಮಿಂದ್ರಿ,**

ಯೋಷ್ವಿಂದ್ರಿಯಾಣಿ ತನ್ಮಾತ್ರೇಷು ತನ್ಮಾತ್ರಾಣಿ ಭೂತಾದೌ ವಿಲೀಯಂತೆ ಭೂತಾದಿರ್ಮಹತಿ ವಿಲೀಯತೇ ಮಹಾನ ವ್ಯಕ್ತೇ ವಿಲೀಯತೇಽ ವ್ಯಕ್ತಮಕ್ಷರೇ ವಿಲೀಯತೇ ಅಕ್ಷರೇ ತಮಸಿ ವಿಲೀಯತೇ ತಮಃ ಪರೇ ದೇವೇ ಏಕೀ ಭವತಿ ಪರಸ್ತಾನ್ನ ಸನ್ನಾಸನ್ನ ಸದಸತ್ ॥

ವಿದೇಹ ಮುಕ್ತನು ಬ್ರಹ್ಮದಲ್ಲಿ ಲಯವಾಗುವ ಕ್ರಮವನ್ನು ಹೇಳುತ್ತಾರೆ. ಪೃಥ್ವಿಯು ನೀರಿನಲ್ಲಿ, ನೀರು, ಅಗ್ನಿಯಲ್ಲಿ, ಅಗ್ನಿಯು ವಾಯುವಿನಲ್ಲಿ, ವಾಯು ಆಕಾಶದಲ್ಲಿ ಆಕಾಶವು ಇಂದ್ರಿಯಗಳಲ್ಲಿ ಲಯವಾಗುತ್ತದೆ. ಇಂದ್ರಿಯಗಳು ಶಬ್ದಾದಿ ತನ್ಮಾತ್ರೆಗಳಲ್ಲಿ, ತನ್ಮಾತ್ರೆಗಳು ಭೂತಾದಿ ಅಹಂಕಾರದಲ್ಲಿ, ಅದು ಮಹತತ್ವದಲ್ಲಿ ಮಹತತ್ವವು ಅವ್ಯಕ್ತದಲ್ಲಿ, ಅವ್ಯಕ್ತವು ಅಕ್ಷರದಲ್ಲಿ, ಅಕ್ಷರವು ತಮದಲ್ಲಿ, ತಮವು ಪರಬ್ರಹ್ಮದಲ್ಲಿ ಒಂದಾಗುತ್ತದೆ. ಪರಬ್ರಹ್ಮಕ್ಕಿಂತ ಭಿನ್ನವಾಗಿ ಕಾರ್ಯ ಕಾರಣಗಳಿರುವುದಿಲ್ಲ. ಅದುವೇ ಕಾರ್ಯಕಾರಣವಾಗಿದೆ, ॥೩॥

ಪ್ರಾರಬ್ಧಕ್ಷಯವಶಾದ್ದೇಹತ್ರಯಭಂಗಂ ಪ್ರಾಪ್ಯೋಪಾಧಿ
ನಿರ್ಮುಕ್ತ ಘಟಾಕಾಶವತ್ಪರಿಪೂರ್ಣತಾ ವಿದೇಹಮುಕ್ತಿಃ ॥

ಪ್ರಾರಬ್ಧಕರ್ಮವು ಕ್ಷಯವಾಗುವುದರಿಂದ ಮೂರು ದೇಹಗಳು ನಾಶವನ್ನು ಹೊಂದಿ ಘಟವು ನಾಶವಾಗಲು ಘಟಾಕಾಶವು ಮಹಾ

ಕಾಶದಲ್ಲಿ ಒಂದಾಗುವಂತೆ ಉಪಾಧಿನಾಶವಾಗಲು ಪೂರ್ಣತ್ವರೂಪ ವಿದೇಹ ಮುಕ್ತಿಯನ್ನು ಪಡೆಯುತ್ತಾನೆ. ॥೪॥

ಅಹಿನಿರ್ಲ್ವಯನೀ ಸರ್ಪನಿರ್ಮೋಕೋ ಜೀವವರ್ಜಿತಃ ।
ವಲ್ಮೀಕೇ ಪತಿತಸ್ತಿಷ್ಠೇತ್ತಂ ಸರ್ಪೋ ನಾಭಿಮನ್ಯತೇ ।
ಏವಂ ಸ್ಥೂಲಂ ಚ ಸೂಕ್ಷ್ಮಂ ಚ ಶರೀರಂ ನಾಭಿಮನ್ಯತೇ ॥

ಸರ್ಪವು ಹುತ್ತಿನಲ್ಲಿ ಬಿಟ್ಟಿರುವ, ಜೀವವಿಲ್ಲದೆ ಬಿದ್ದಿರುವ, ಪೊರೆಯು ಅಭಿಮಾನವನ್ನು ಮಾಡದಂತೆ, ಜ್ಞಾನಿಯು ಸ್ಥೂಲ, ಸೂಕ್ಷ್ಮ ಶರೀರಗಳನ್ನು ನಾನೆಂದು ಅಭಿಮಾನ ಪಡುವುದಿಲ್ಲ ॥೫॥

ವಿಶ್ವಶ್ಚ ತೈಜಸಶ್ಚೈವ ಪ್ರಾಜ್ಞಶ್ಚೇತಿ ಚ ತೇ ತ್ರಯಃ ।
ವಿರಾಡ್ಹಿರಣ್ಯಗರ್ಭಶ್ಚ ಈಶ್ವರಶ್ಚೇತಿ ತೇ ತ್ರಯಃ ॥
ಬ್ರಹ್ಮಾಂಡಂ ಚೈವ ಪಿಂಡಾಂಡಂ ಲೋಕಾ ಭೂರಾದಯಃ ಕ್ರಮಾತ್ ॥ ಸ್ವಸ್ವೋಪಾಧಿಲಯಾದೇವ ಲೀಯಂತೇ ಪ್ರತ್ಯಗಾತ್ಮನಿ ॥

ವಿಶ್ವ, ತೈಜಸ, ಪ್ರಾಜ್ಞರೆಂದು ಅವರು ಮೂವರು. ವಿರಾಟ್ ಹಿರಣ್ಯಗರ್ಭ, ಈಶ್ವರನೆಂದು ಮೂವರು ಈಶ್ವರರು, ಬ್ರಹ್ಮಾಂಡ, ಪಿಂಡಾಂಡ ಮತ್ತು ಭೂರಾದಿ ಲೋಕಗಳು ತಮ್ಮ ತಮ್ಮ ಉಪಾಧಿಗಳ ನಾಶದಿಂದ ಪ್ರತ್ಯಗಾತ್ಮನಲ್ಲಿ ಲಯವಾಗುತ್ತವೆ. ॥೬॥

ಕಾಲಭೇದಂ ವಸ್ತು ಭೇದಂ ದೇಶಭೇದಂ ಸ್ವಭೇದಕಮ್ ।
ಕಿಂಚಿದ್ಭೇದೋ ನ ತಸ್ಯಾಸ್ತಿ ಕಿಂಚಿದ್ವಾಪಿ ನ ವಿದ್ಯತೇ ॥

ಭೂತಾದಿ ಕಾಲಭೇದ, ಘಟ ಪಟಾದಿ ವಸ್ತು ಭೇದ, ಕರ್ಣಾಟಕ ಮೊದಲಾದ ದೇಶಭೇದಗಳೇ ಆಗಲಿ ತನ್ನ ಸ್ವರೂಪ ವನ್ನು ಬೇರ್ಪಡಿಸುವ ಸ್ವಲ್ಪ ಭೇದವೂ ಕೂಡ ಅವನಿಗಿರುವುದಿಲ್ಲ ॥೭॥

ಬ್ರಹ್ಮಭೂತಃ ಪ್ರಶಾಂತಾತ್ಮಾ ಬ್ರಹ್ಮಾನಂದಮಯಃ ಸುಖೀ ।
ಸ್ವಚ್ಛರೂಪೋ ಮಹಾಮೌನೀ ವೈದೇಹೀ ಮುಕ್ತ ಏವ ಸಃ ॥

ಹೇ ಸೀತೆಯೆ, ಬ್ರಹ್ಮರೂಪನಾದ, ಪ್ರಶಾಂತಾತ್ಮನಾದ, ಬ್ರಹ್ಮಾನಂದಮಯನಾದ ಸುಖಿಯಾದ ಸ್ವಚ್ಛರೂಪನಾದ, ಮಹಾ ಮೌನಿಯು ಮುಕ್ತನೇ ಆಗಿದ್ದಾನೆ. ॥೮॥

ಜೀವಾತ್ಮಾ ಪರಮಾತ್ಮೇತಿ ಚಿಂತಾಸರ್ವಸ್ವವರ್ಜಿತಃ
ಸರ್ವಸಂಕಲ್ಪಹೀನಾತ್ಮಾ ವೈದೇಹೀ ಮುಕ್ತ ಏವ ಸಃ

ಹೇ ಸೀತೆ ! ಜೀವಾತ್ಮ ಮತ್ತು ಪರಮಾತ್ಮನೆಂದುಬ ಚಿಂತೆ ಹಾಗೂ ಸರ್ವವನ್ನೂ ಬಿಟ್ಟ ಸಕಲ ಸಂಕಲ್ಪಗಳಿಲ್ಲದವನು ಮುಕ್ತನು. ॥೯॥

ಓಂಕಾರವಾಚ್ಯಹೀನಾತ್ಮಾ ಸರ್ವವಾಚ್ಯ ವಿವರ್ಜಿತಃ ।
ಅವಸ್ಥಾತ್ರಯ ಹೀನಾತ್ಮಾ ವೈದೇಹೀ ಮುಕ್ತ ಏವ ಸಃ ॥

ಹೇ ಸೀತೆಯೇ! ಯಾವನು ಆತ್ಮನು ಓಂಕಾರ ವಾಚ್ಯನಲ್ಲದವನು ಸರ್ವವಾಚ್ಯಗಳಿಲ್ಲ ದನೂ ಮತ್ತು ಮೂರು ಅವಸ್ಥೆಗಳಿಲ್ಲದವನೆಂದು ತಿಳಿಯುತ್ತಾನೆಯೋ, ಅವನು ಮುಕ್ತನು. ॥೧೧॥

ಚಿತ್ತವೃತ್ತೇರತೀತೋ ಯಶ್ಚಿತ್ತವೃತ್ತ್ಯವಭಾಸಕಃ ॥
ಸರ್ವವೃತ್ತಿವಿಹೀನಾತ್ಮಾ ವೈದೇಹೀ ಮುಕ್ತ ಏವ ಸಃ ॥

ಹೇ ಸೀತೆಯೇ, ಚಿತ್ತ ವೃತ್ತಿಗಳಿಗಿಂತಲೂ ಆಚೆ ಇರುವ ಮತ್ತು ಸರ್ವ ಚಿತ್ತವೃತ್ತಿಗಳನ್ನು ಬೆಳಗುವ, ಸರ್ವವೃತ್ತಿಗಳಿಲ್ಲದ ಆತ್ಮನು ಮುಕ್ತನು. ॥೧೨॥

ಇಪ್ಪತ್ತನೇ ಪ್ರಕರಣವು ಮುಗಿದುದು

## ಉಪಸಂಹಾರ

ವಿಧ್ಯಂಘ್ರಿರ್ಬಂಧಮುಗ್ಧ್ಯಂಘ್ರಿಃ ಹ್ಯವಿದ್ವದ್ಧ್ಯೇಯಜಂಘಕಃ ।
ಜಗನ್ಮಿಥ್ಯಾ ಜಾನುದೇಶ ಉಪದೇಶೋರುದೇಶಕಃ ।

ಬ್ರಹ್ಮಾತ್ಮೈಕ್ಯ ಕಟೀದೇಶೋ ವಿದ್ವನ್ಮನನನಾಭಿಕಃ ।
ಜೀವನ್ಮುಕ್ತ್ಯಾಖ್ಯದಹರಃ ಸ್ವಾನುಭೂತಿಕರದ್ವಯಃ ॥

ಸ್ವಸಮಾಧಿಸ್ಕಂಧದೇಶಃ ಸ್ವಸ್ವರೂಪಾಖ್ಯಕಂದರಃ ।
ಫಲಭೂತಮಹಾವಾಕ್ಯ ಫಲೋ ವೈದೇಹಮಸ್ತಕಃ ॥

ಏವಂ ಸಿದ್ಧಾದ್ಯವಿದೇಹಾಂತ ಮಹಾವಾಕ್ಯಕಲೇವರಃ ।
ವಸ್ತುತೋನಿರ್ವಿಶೇಷೇತ್ಮಾತ್ರಿಸಾನ್ನಾರಾಯಣೋಽಸ್ಮ್ಯಹಮ್ ॥

ಯನ್ಮಹಾವಾಕ್ಯ ಸಿದ್ಧಾಂತಂ ಮುಕ್ತ ಚಿತ್ತೈಕಗೋಚರಮ್ ।
ಶಾಂತಾನಂದೇಂದ್ರ ಸಂಜ್ಞಂ ತಂ ನೌಮಿ ಸರ್ವಾತ್ಮಕಂ ಮಹಃ ॥

ಈಗ ಈ ಮಹಾವಾಕ್ಯ ರತ್ನಾವಳಿ ಎಂಬ ಗ್ರಂಥವು ಒಬ್ಬ ಮನುಷ್ಯನಂತೆ ಕೈಕಾಲು ಮೊದಲಾದ ಅವಯವಗಳಿಂದ ಕೂಡಿದೆ ಎಂದು ಹೇಳುತ್ತಾರೆ. ಇಲ್ಲಿ ವಿಧಿಬೋಧಕ ವಾಕ್ಯಗಳು ಪಾದಗಳು. ಬಂಧ ಮತ್ತು ಮುಕ್ತಿಗಳ ಸ್ವರೂಪವನ್ನು ತಿಳಿಸುವ ವಾಕ್ಯಗಳು ಪಾದದ ಹಡ್ಡುಗಳು, ಅಜ್ಞಾನಿಗಳ ನಿಂದೆಮಾಡುವ ಭಾಗವು. ಮೊಳ

ಕಾಲು, ಉಪದೇಶವನ್ನು ಮಾಡುವ ಭಾಗವು. ತೊಡೆಗಳು. ಜೀವ, ಬ್ರಹ್ಮರ ಐಕ್ಯ ಬೋಧಕವಾಕ್ಯಗಳು ಟೊಂಕವು. ಜೀವನ್ಮುಕ್ತ ಸ್ವರೂಪ ಬೋಧಕ ಭಾಗವು ಹೃದಯವು. ಸ್ವಾನುಭವವು ಎರಡು ಕೈಗಳು. ತನ್ನ ಸಮಾಧಿಯು ಹೆಗಲು. ತನ್ನ ಸ್ವರೂಪವೆಂಬುದು ಕುತ್ತಿಗೆಯು. ಮಹಾವಾಕ್ಯ ಫಲವಾದ ವಿದೇಹ ಮುಕ್ತಿಯು ತಲೆಯು. ಈ ಪ್ರಕಾರ ವಿಧಿ ಮೊದಲ್ಗೊಂಡು ಮಹಾವಾಕ್ಯದ ಫಲವಾದ ಸಮಾಧಿ ಎಂಬ ಮಸ್ತಕದವರೆಗಿರುವುದೊಂದು ಶರೀರವಾಗಿದೆ.

ವಾಸ್ತವವಾಗಿ ನಾನು ಮೂರು ಪಾದಗುಳುಳ್ಳ ನಾರಾಯಣನಾಗಿದ್ದೇನೆ. ಯಾವ ಈ ಮಹಾವಾಕ್ಯದ ಸಿದ್ಧಾಂತವು ಮುಕ್ತನ ಚಿತ್ತಕ್ಕೆ ಗೋಚರವಾಗುತ್ತದೆಯೋ, ಆ ವಾಸುದೇವನೆಂಬ ಹೆಸರಿನ ಸರ್ವರ ಆತ್ಮವಾದ ತೇಜಸ್ಸಿಗೆ ನಾನು ನಮಸ್ಕರಿಸುತ್ತೇನೆ. ॥೧॥

ಹೀಗೆಂದು ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯರಾದ ಶ್ರೀಶಾಂತಾನಂದ ಮಹಾಸ್ವಾಮಿಗಳ ಪಾದಕಮಲಗಳ ಸುಗಂಧದ ಆಸ್ವಾಸದಿಂದ ತೃಪ್ತರಾದ ಶ್ರೀ ಆದಿದೇವಾನಂದ ಸ್ವಾಮಿಗಳಿಂದ ಬರೆಯಲ್ಪಟ್ಟ ಈಶಾವಾಸ್ಯ ಮೊದಲಾದ ಒಂದನೂರದ ಎಂಟು ಉಪನಿಷತ್ತುಗಳ ಸಾರಸಂಗ್ರಹ ಭೂತವಾದ ಒಂದು ಸಾವಿರದ ಎಂಟುವಾಕ್ಯಗಳಲ್ಲಿ ಸಂಗ್ರಹಿತವಾದ ಮಹಾವಾಕ್ಯ ರತ್ನಾವಳಿಯು ಮುಗಿದುದು.

**ಓಂ ಶಾಂತಿಃ ಶಾಂತಿಃ ಶಾಂತಿಃ**

ಶ್ರೀ ಶಾಂತಾನಂದ ಸದ್ಗುರು ಪ್ರಸನ್ನ

ಶ್ರೀ ಅದ್ವೈತಾನಂದ ಸದ್ಗುರು ಪ್ರಸನ್ನ

## ತುಮಕೂರಿನ ಕೈಲಾಸಾಶ್ರಮದಿಂದ ಪ್ರಕಟವಾಗಬೇಕಾದ ಗ್ರಂಥಗಳು.

೧. ಶ್ರೀ ಮದ್ಭಗವದ್ಗೀತಾ ೧೦೦೦ ಪುಟಗಳು
ಸಾನ್ವಯ ಶಂಕರಾನಂದೀಯ
ವ್ಯಾಖ್ಯಾ ಸಹಿತ

೨. ವೇದಾಂತ ಕಥಾ ಸುಧಾಕರ (ಅಚ್ಚಿನಲ್ಲಿ)

ಉತ್ತಮ ಗ್ರಂಥಗಳ ಪ್ರಕಟನೆಯನ್ನು ಬಯಸುವ ದಾನಿಗಳು ಉದಾರವಾಗಿ ಧನ ಸಹಾಯ ಮಾಡಿದರೆ ಅವರ ಹೆಸರು ಮತ್ತು ಫೋಟೋಗಳನ್ನು ಗ್ರಂಥದಲ್ಲಿ ಪ್ರಚುರ ಪಡಿಸಲಾಗುತ್ತದೆ. ಮತ್ತು ದಾನಿಗಳಿಗೆ ಉಚಿತವಾಗಿ ಪುಸ್ತಕವನ್ನು ಕೊಡುತ್ತೇವೆ.

ಪುಸ್ತಕ ದೊರೆಯುವ ಸ್ಥಳ

೧) ಸಮಾಜ ಪುಸ್ತಕಾಲಯ ಶಿವಾಜಿ ಬೀದಿ ಧಾರವಾಡ.

೨) ಸಮಾಜ ಪುಸ್ತಕಾಲಯ ಕೊಪ್ಪೀಕರ ರೋಡ ಹುಬ್ಬಳ್ಳಿ

೩) ವೇದಾಂತ ಭವನ ಉಮಾ ಟಾಕೀಜ ಹತ್ತಿರ
ಚಾಮರಾಜ ಪೇಟೆ ಬೆಂಗಳೂರು.

ಶ್ರೀ ಶಾಂತಾನಂದ ಸದ್ಗುರು ಪ್ರಸನ್ನ
ಶ್ರೀ ಅದ್ವೈತಾನಂದ ಸದ್ಗುರು ಪ್ರಸನ್ನ

ತುಮಕೂರಿನ ಕೈಲಾಸಾಶ್ರಮದಿಂದ ಪ್ರಕಟವಾಗಬೇಕಾದ ಗ್ರಂಥಗಳು.

೧. ಶ್ರೀ ಮದ್ಭಗವದ್ಗೀತಾ ೧೦೦೦ ಪುಟಗಳು
ಸಾನ್ವಯ ಶಂಕರಾನಂದೀಯ
ವ್ಯಾಖ್ಯಾ ಸಹಿತ

೨. ವೇದಾಂತ ಕಥಾ ಸುಧಾಕರ (ಅಚ್ಚಿನಲ್ಲಿ)

ಉತ್ತಮ ಗ್ರಂಥಗಳ ಪ್ರಕಟನೆಯನ್ನು ಬಯಸುವ ದಾನಿಗಳು ಉದಾರವಾಗಿ ಧನ ಸಹಾಯ ಮಾಡಿದರೆ ಅವರ ಹೆಸರು ಮತ್ತು ಫೋಟೋಗಳನ್ನು ಗ್ರಂಥದಲ್ಲಿ ಪ್ರಚುರ ಪಡಿಸಲಾಗುತ್ತದೆ. ಮತ್ತು ದಾನಿಗಳಿಗೆ ಉಚಿತವಾಗಿ ಪುಸ್ತಕವನ್ನು ಕೊಡುತ್ತೇವೆ.

ಪುಸ್ತಕ ದೊರೆಯುವ ಸ್ಥಳ

೧) ಸಮಾಜ ಪುಸ್ತಕಾಲಯ ಶಿವಾಜಿ ಬೀದಿ ಧಾರವಾಡ.

೨) ಸಮಾಜ ಪುಸ್ತಕಾಲಯ ಕೊಪ್ಪಿಕರ ರೋಡ ಹುಬ್ಬಳ್ಳಿ

೩) ವೇದಾಂತ ಭವನ ಉಮಾ ಟಾಕೀಜ ಹತ್ತಿರ
ಚಾಮರಾಜ ಪೇಟೆ ಬೆಂಗಳೂರು.